# ಕೊಪ್ಪಳ ಜಿಲ್ಲೆಯ ಐತಿಹಾಸಿಕ ಸ್ಥಳಗಳ ಸಾಂಸ್ಕೃತಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಎಂ.ಫಿಲ್. ಪ್ರಬಂಧ)

ಸಂಶೋಧಕ

ಇಬ್ರಾಹಿಂ ಸಾಬ

ಮಾರ್ಗದರ್ಶಕರು

ಡಾ. ಎನ್. ಚಿನ್ನಸ್ವಾಮಿ ಸೋಸಲೆ

ಪ್ರವಾಚಕರು




ಸಮಾಜ ವಿಜ್ಞಾನಗಳ ನಿಕಾಯ

ಚರಿತ್ರೆ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೬ - ೦೭

# ಕೊಪ್ಪಳ ಜಿಲ್ಲೆಯ ಐತಿಹಾಸಿಕ ಸ್ಥಳಗಳ ಸಾಂಸ್ಕೃತಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಎಂ.ಫಿಲ್. ಪ್ರಬಂಧ)

ಸಂಶೋಧಕ

ಇಬ್ರಾಹಿಂ ಸಾಬ



ಮಾರ್ಗದರ್ಶಕರು

ಡಾ. ಎನ್.ಚಿನ್ನಸ್ವಾಮಿ ಸೋಸಲೆ

ಪ್ರವಾಚಕರು




ಸಮಾಜ ವಿಜ್ಞಾನಗಳ ನಿಕಾಯ

ಚರಿತ್ರೆ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೬ - ೦೭

# ದೃಢೀಕರಣ ಪತ್ರ

**"ಕೊಪ್ಪಳ ಜಿಲ್ಲೆಯ ಐತಿಹಾಸಿಕ ಸ್ಥಳಗಳ ಸಾಂಸ್ಕೃತಿಕ ಅಧ್ಯಯನ"** ಒಂದು ಅಧ್ಯಯನ ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ ಇಬ್ರಾಹಿಂ ಸಾಬ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಚಿನ್ನಸ್ವಾಮಿ ಸೋಸಲೆ

**ಡಾ.ಎಸ್.ಚಿನ್ನಸ್ವಾಮಿ ಸೋಸಲೆ**
ಮಾರ್ಗದರ್ಶಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : 30.07.07.
ಸ್ಥಳ : ವಿದ್ಯಾರಣ್ಯ

# ಪ್ರಮಾಣ ಪತ್ರ

**"ಕೊಪ್ಪಳ ಜಿಲ್ಲೆಯ ಐತಿಹಾಸಿಕ ಸ್ಥಳಗಳ ಸಾಂಸ್ಕೃತಿಕ ಅಧ್ಯಯನ"** ಒಂದು ಅಧ್ಯಯನ ಎಂಬ ನಿಬಂಧವನ್ನು ಡಾ.ಎನ್.ಚಿನ್ನಸ್ವಾಮಿ ಸೋಸಲೆ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಎಂ.ಫಿಲ್. ಪದವಿಗಾಗಿ ಚರಿತ್ರೆ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಇಬ್ರಾಹಿಂ ಸಾಬ
ಸಂಶೋಧಕ
ಚರಿತ್ರೆ ವಿಭಾಗ

ದಿನಾಂಕ : 30-07-07
ಸ್ಥಳ : ವಿದ್ಯಾರಣ್ಯ

## ಕೃತಜ್ಞತೆಗಳು

**"ಕೊಪ್ಪಳ ಜಿಲ್ಲೆಯ ಐತಿಹಾಸಿಕ ಸ್ಥಳಗಳ ಸಾಂಸ್ಕೃತಿಕ ಅಧ್ಯಯನ"** ಎಂಬ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್ ಪದವಿಗಾಗಿ ಅಧ್ಯಯನ ಮಾಡಲು ಅವಕಾಶ ಕಲ್ಪಿಸಿಕೊಟ್ಟ ಹಿಂದಿನ ಕುಲಪತಿಗಳಾದ ಡಾ.ಬಿ.ಎ.ವಿವೇಕ ರೈ, ಇಂದಿನ ಪ್ರಭಾರಿ ಕುಲಪತಿಗಳಾದ ಡಾ.ಕೆ.ವಿ.ನಾರಾಯಣ ಹಾಗೂ ಕುಲಸಚಿವರಾದ ವಿ.ಶಂಕರ್ ಅವರಿಗೆ ಹಾಗೂ ಅಧ್ಯಯನಾಂಗದ ನಿರ್ದೇಶಕರಿಗೆ ಹೃತ್ಪೂರ್ವಕ ಅಭಿನಂದನೆಗಳನ್ನು ಸಲ್ಲಿಸುತ್ತೇನೆ.

ಅಧ್ಯಯನ ಕೈಗೊಳ್ಳಲು ತಾಳ್ಮೆಯಿಂದ ಸೂಕ್ತ ಸಲಹೆ, ಸಹಕಾರ ಹಾಗೂ ಮಾರ್ಗದರ್ಶನವನ್ನು ನೀಡಿದ ಚರಿತ್ರೆ ವಿಭಾಗದ ಪ್ರವಾಚಕರಾದ ಡಾ. ಎನ್.ಚಿನ್ನಸ್ವಾಮಿ ಸೋಸಲೆಯವರಿಗೆ ತುಂಬು ಹೃದಯದ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ಹಾಗೆಯೇ ವಿಭಾಗದ ಮುಖ್ಯಸ್ಥರಾದ ಡಾ.ಕೆ.ಮೋಹನ್ ಕೃಷ್ಣ ರೈ, ಹಿರಿಯ ಪ್ರಾಧ್ಯಾಪಕರಾದ ಪ್ರೊ.ಲಕ್ಷ್ಮಣ್ ತೆಲಗಾವಿ, ಡಾ.ಟಿ.ಪಿ.ವಿಜಯ್, ಡಾ.ಸಿ.ಆರ್.ಗೋವಿಂದರಾಜು, ಡಾ.ವಿರೂಪಾಕ್ಷಿ ಪೂಜಾರಹಳ್ಳಿ ಅವರಿಗೆ ಅನಂತ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಅಧ್ಯಯನದ ಸಂದರ್ಭದಲ್ಲಿ ಹಲವು ಸೂಕ್ತ ಸಲಹೆಗಳನ್ನು ನೀಡಿದ ಡಾ.ವಾಸುದೇವ ಬಡಿಗೇರ, ಡಾ.ರಹಮತ್ ತರೀಕೆರೆ, ಡಾ.ಎಸ್.ಎ.ಖಾಜಿ, ಡಾ.ಆರ್.ಎಂ.ಷಡಕ್ಷರಯ್ಯ, ಡಾ.ಝಡ್.ಕೆ.ಅನ್ಸಾರಿ ಹಾಗೂ ಕ್ಷೇತ್ರಕಾರ್ಯದ ಸಮಯದಲ್ಲಿ ಮಾಹಿತಿ ನೀಡಿ ಸಹಕರಿಸಿದ ಬಿ.ಸಿ.ಪಾಟೀಲ, ಎಂ.ಎಸ್.ಸವದತ್ತಿ, ಪ್ರೊ.ಅಲ್ಲಮಪ್ರಭು ಬೆಟ್ಟದೂರು, ತೂ.ಕ.ಶಂಕರಯ್ಯ, ಬಿ.ಎಸ್.ಹಡಗಲಿ, ಎಂ.ಎಂ.ಕಂಬಾಳಿಮಠ, ದೊಡ್ಡಪ್ಪ ಪಾಟೀಲ, ಬಸವರಾಜ ಕಂಬಳಿ, ರಾಘವೇಂದ್ರ ಆಚಾರ್ಯ, ಈ.ಲಕ್ಷ್ಮಣ, ಬಸವರಾಜ ಪೂಜಾರ, ಸಿದ್ಧಲಿಂಗಪ್ಪ ಕೊಟ್ನೆಕಲ್, ಡಾ.ಶರಣಬಸಪ್ಪ ಕೋಲ್ಕಾರ, ಕೆ.ಗಣೇಶ ಕುರುಗೋಡ, ನಟರಾಜ ಸೋನಾರ, ಸವಿತಾ ವೀರನಗೌಡ್ರು, ಡಾ.ಮುಮ್ತಾಜ್‌ಬೇಗಂ, ಬಸವರಾಜ, ವೀ.ಮೂಲಿಮನಿ ಅವರಿಗೆ ನನ್ನ ಅನಂತ ಧನ್ಯವಾದಗಳು ಸಲ್ಲಿಸುವೆ.

ನನ್ನ ಬದುಕಿಗೆ ಶಿಕ್ಷಣದ ಬೆಳಕನ್ನು ನೀಡಿ ದಾರಿ ತೋರಿಸಿದ ನನ್ನ ಆತ್ಮೀಯ ಗುರುಗಳಾದ ಎಂ.ಎಸ್.ಸವದತ್ತಿ ಅವರಿಗೆ, ನನ್ನ ಶಿಕ್ಷಣ ಮತ್ತು ಏಳ್ಗೆಯನ್ನು ಸದಾ ಬಯಸುತ್ತಿರುವ ತಂದೆ, ತಾಯಿ, ಅಣ್ಣಾ, ತಮ್ಮಂದಿರು, ಓದಿಗೆ ಸೂಕ್ತ ಪ್ರೇರಣೆ ಸಹಕಾರ ಪ್ರೋತ್ಸಾಹ ನೀಡುತ್ತಿರುವ ಮಾವನವರಾದ ರಾಜಾಸಾಬ್, ಹಸನ್‌ಸಾಬ್ ದಾಸಾಪೂರ್ ಅವರಿಗೆ ನನ್ನ ಅನಂತ ವಂದನೆಗಳನ್ನು ಅರ್ಪಿಸುತ್ತೇನೆ.

ಪುಸ್ತಕ ಸೌಲಭ್ಯವನ್ನು ಒದಗಿಸಿಕೊಟ್ಟ ಕನ್ನಡ ವಿಶ್ವವಿದ್ಯಾಲಯದ ಗ್ರಂಥಾಲಯ ಅಧಿಕಾರಿಗಳಾದ ಡಾ.ರಾಧಾಕೃಷ್ಣನ್, ಡಾ.ಎಚ್.ನಾಗವೇಣಿ ಇತರ ಸಿಬ್ಬಂದಿ ವರ್ಗದವರ ಸಹಕಾರವನ್ನು ಈ ಸಂದರ್ಭದಲ್ಲಿ ನೆನೆಯದೆ ಇರಲಾರೆ.

ಸ್ನೇಹಿತರಾಗಿ ಹಿತೈಷಿಗಳಾಗಿ ಯಾವತ್ತೂ ನನ್ನ ಉನ್ನತಿಯನ್ನು ಬಯಸುತ್ತಿರುವ ಆನಂದ ವೇದ ಪಾಠಕ್, ಅಶೋಕ ಓಜಿನಹಳ್ಳಿ, ಜೆ.ಕೆ.ಬಸವರಾಜ, ಸಿ.ಬಸವರಾಜ, ಸುರೇಶ ಸೊನ್ನದ, ಪ್ರಕಾಶ ಬಳ್ಳಾರಿ, ಉಮೇಶ್ ಕಾತರಕಿ, ಎಂ.ಪ್ರಭುದೇವ, ನಜೀರ್‌ಸಾಬ್ ಕುಕನೂರು, ಮುರ್ತುಜಾಸಾಬ್, ಷಣ್ಮುಕಪ್ಪ, ಪ್ರಭುರಾಜ ನಾಯಕ, ವಿಜಯ ಅಮೃತರಾಜ, ಪಿ.ಎನ್.ಲೋಕೇಶ್, ಅರುಣಕುಮಾರ ಹೂಗಾರ, ಶಬ್ಬೀರ್‌ಸಾಬ್, ಖಾಜಾವಲಿ ಕುದಿರಿಮೋತಿ, ಹಿರೇಬಿದ್ರಿ ಹೋಳಿಬಸಪ್ಪ, ಹನುಮಂತರಾಯ, ಓ.ದೇವರಾಜ, ಆರ್.ಲೋಹಿತ್, ಸಿದ್ದನಗೌಡ, ತಿಪ್ಪೇಸ್ವಾಮಿ, ಶಶಿಧರ ಮಲ್ಲಪ್ಪ,ಎಸ್.ಸತ್ಯವತಿ, ನಾಝಿಯಾ ಖಾಜಿ, ಎಂ.ಎ.ಅಬ್ದುಲ್‌ನಬಿ, ಡಾ.ಗೋವಿಂದ ಗೆಳೆಯರಿಗೂ ಹಿತೈಷಿಗಳಿಗೂ, ಪ್ರೀತಿಯಿಂದ ಅಕ್ಷರ ಸಂಯೋಜಿಸಿದ ಜಿ.ಶಿವಕುಮಾರ್, ಉಲ್ಲಾಸ್.ಜಿ ಅವರಿಗೆ ನನ್ನ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

ಇಬ್ರಾಹಿಂ ಸಾಬ್

## ಪರಿವಿಡಿ

# ಒಂದು

## ಪ್ರವೇಶ :

ಕರ್ನಾಟಕದ ಹೃದಯ ಭಾಗದಲ್ಲಿರುವ ಕೊಪ್ಪಳ, ಕರ್ನಾಟಕದ ಇತಿಹಾಸದಲ್ಲಿ ಮಹತ್ವದ ಸ್ಥಾನ ಪಡೆದಿದೆ. ಕನ್ನಡ ನಾಡಿನ ಇತಿಹಾಸ ಹಾಗೂ ಸಂಸ್ಕೃತಿಗೆ ಕೊಡುಗೆ ನೀಡಿರುವುದರಲ್ಲಿ ಕೊಪ್ಪಳ ಕೂಡ ಒಂದಾಗಿದೆ. ಶಾಸನಗಳಲ್ಲಿ ಹಾಗೂ ಸಾಹಿತ್ಯದಲ್ಲಿ ಜೈನರ ಕಾಶಿ ಹಾಗೂ ತಿರುಳ್ಗನ್ನಡ ನಾಡೆಂದು ಕರೆಯಿಸಿಕೊಂಡಿರುವುದು ಈ ಪ್ರದೇಶವೆ. ಸಾಮ್ರಾಟ ಅಶೋಕನ ಶಾಸನಗಳನ್ನೊಳಗೊಂಡ ಈ ಊರು ರಾಜ್ಯದ ವಿವಿಧ ರಾಜಮನೆತನಗಳ ಆಳ್ವಿಕೆಗೆ ಒಳಗಾಗಿ, ಪ್ರಾಗೈತಿಹಾಸಿಕ ಹಿರಿಮೆಯನ್ನು ಹೊಂದಿರುವ ಕೊಪ್ಪಳವು ಸಮಕಾಲೀನ ಇತಿಹಾಸದಲ್ಲಿ ತನ್ನ ಜೀವಂತಿಕೆಯನ್ನು ಉಳಿಸಿಕೊಂಡು ಬಂದಿದೆ. ಇತಿಹಾಸದ ಬೇರುಗಳ ಪಳೆಯುಳಿಕೆಗಳನ್ನು ತನ್ನ ಒಡಲಲ್ಲಿ ತುಂಬಿಕೊಂಡಿರುವ ಇದು ಚರಿತ್ರೆಯ ಅಧ್ಯಯನಾರ್ಥಿಗಳಿಗೆ ಮಾಹಿತಿಯ ಕಣಜದಂತಿದೆ. ಕೊಪ್ಪಳವು ಸುಮಾರು ಎರಡು ಸಾವಿರ ವರ್ಷಗಳ ಇತಿಹಾಸವನ್ನು ಹೊಂದಿದ್ದು, ಪ್ರಾಚೀನ ಕಾಲದಿಂದ ಇಂದಿನವರೆಗೂ ಪರಧರ್ಮ ಸಹಿಷ್ಣುತೆಯನ್ನು ಬೆಳೆಸಿಕೊಂಡು ಬಂದಿದೆ.

ಇತಿಹಾಸದ ಆಕರಗಳನ್ನು ಗಮನಿಸಿದಾಗ ನೈಸರ್ಗಿಕ ಸ್ಮಾರಕಗಳು ಹಾಗೂ ಮಾನವ ನಿರ್ಮಿತ ಸ್ಮಾರಕಗಳು ಈ ಪ್ರದೇಶದಲ್ಲಿ ಕಂಡುಬರುತ್ತವೆ. ನೈಸರ್ಗಿಕ ಸ್ಮಾರಕಗಳು ಮಾನವ ನಿರ್ಮಿತ ಸ್ಮಾರಕಗಳಿಗೆ ಮಾದರಿಯಾಗಿವೆ. ಮಾನವರು ನೈಸರ್ಗಿಕ ಸ್ಮಾರಕಗಳನ್ನು ಮಾರ್ಗದರ್ಶಿಯಾಗಿಟ್ಟುಕೊಂಡು ಕೋಟೆ, ಕೊತ್ತಲಗಳು ದೇವಾಲಯಗಳು, ಸ್ಮಾರಕಗಳು, ಕೆರೆಕಟ್ಟೆ, ಬಾವಿಗಳನ್ನು ನಿರ್ಮಿಸಿದ್ದಾರೆ. ನೈಸರ್ಗಿಕ ಸ್ಮಾರಕಗಳಾದ ಗುಹೆಗಳು ಬೆಟ್ಟ-ಗುಡ್ಡಗಳು ಮಾನವ ನಿರ್ಮಿತ ಸ್ಮಾರಕಗಳಿಗೆ ಪ್ರೇರಣೆಯಾಗಿವೆ. ಪುರಾಣಗಳಲ್ಲಿ ಉಲ್ಲೇಖಿಸಿದಂತೆ ಕಿಷ್ಕಿಂದೆ, ಅಂಜನಾದ್ರಿ, ಇಂದ್ರಕೀಲ ಪರ್ವತ, ಹಂಪಸದುರ್ಗ, ಕುಮ್ಮಟದುರ್ಗ ಇನ್ನು ಮುಂತಾದವು ಕೊಪ್ಪಳ ಜಿಲ್ಲೆಯಲ್ಲಿ ಕಂಡುಬರುವ ಪ್ರಮುಖ ನೈಸರ್ಗಿಕ ಸ್ಮಾರಕ ಸ್ಥಳಗಳಾಗಿವೆ.

ಒಂದು ನಾಡಿನ ಚರಿತ್ರೆ ಎಂದರೆ ಆ ಭೂ ಪ್ರದೇಶಗಳನ್ನು ಆಳಿ ಮರೆಯಾದ ಭೂಪಾಲರ ಕತೆಯಷ್ಟೇ ಅಲ್ಲ! ಆ ನಾಡಿನ ಜನಸಮಷ್ಟಿಯ ಚರಿತ್ರೆ ಆ ಜನಾಂಗದ ಒಟ್ಟು ಜೀವನ ಕುರಿತ ಇತಿಹಾಸ. ಅದು ಒಂದು ಜನಪದರ ಆಶೋತ್ತರಗಳು, ನಂಬಿಕೆಗಳು ಜೀವನ ಸಿದ್ಧಾಂತಗಳು ಬದುಕಿನ ಮೌಲ್ಯಗಳು ಮುಂತಾದವುಗಳನ್ನು ಪರಿಚಯಿಸುತ್ತದೆ.[೧]

ಸ್ವಾತಂತ್ರ್ಯ ಪೂರ್ವದಲ್ಲಿ ಜಿಲ್ಲಾ ಕೇಂದ್ರವಾಗಿದ್ದ ಕೊಪ್ಪಳ. ನಂತರದ ಅವಧಿಯಲ್ಲಿ ರಾಯಚೂರು ಜಿಲ್ಲೆಯ ತಾಲೂಕು ಕೇಂದ್ರವಾಗಿ ಈಗ ಮತ್ತೆ ಜಿಲ್ಲಾ ಕೇಂದ್ರವಾಗಿದೆ. ಕೊಪ್ಪಳ, ಗಂಗಾವತಿ, ಕುಷ್ಟಗಿ ಹಾಗೂ ಯಲಬುರ್ಗಾ ಎಂಬ ನಾಲ್ಕು ತಾಲೂಕುಗಳನ್ನು ಕೊಪ್ಪಳ ಜಿಲ್ಲೆ ಒಳಗೊಂಡಿದೆ. ತುಂಗಭದ್ರಾ ಅಣೆಕಟ್ಟು ಕಟ್ಟಿದ ಮೇಲೆ ಗಂಗಾವತಿ ತಾಲೂಕಿನ ಬಹುತೇಕ ಕೃಷಿ ಪ್ರದೇಶ ನೀರಾವರಿಗೆ ಒಳಪಟ್ಟಿದೆ. ಇದಕ್ಕೆ ಮೊದಲು ಹುಲಿಗಿಯ ಬಳಿ ತುಂಗಭದ್ರಾ ನದಿಯ ಸೀಳು ನಾಲೆ ಮತ್ತು ಸಾಣಾಪುರದ ಪ್ರಾಚೀನ ನಾಲೆಗಳು ನೀರಾವರಿಗೆ ನೆರವಾಗುತ್ತಿದ್ದವು. ಪುರದ ಬಳಿ ಹರಿಯುವ ಹೊಳೆ ಹಾಗೂ ಕಿನ್ನಾಳದ ಕಡೆಯಿಂದ ಬರುವ ಹಿರೇ ಹಳ್ಳಗಳ ದಂಡೆಯ ಪ್ರದೇಶಗಳು ನೀರಾವರಿಗೆ ಅನುಕೂಲವಿದ್ದು ಜನವಸತಿ ಪ್ರದೇಶಗಳಾಗಿವೆ. ಉಳಿದಂತೆ ಇರುವ ಬಯಲು ಭೂಮಿ ಒಣ ಪ್ರದೇಶವಾಗಿರುವುದರಿಂದ ಪ್ರಾಚೀನ ಕಾಲದಿಂದಲೂ ಇಲ್ಲಿ ಜನವಸತಿ ಸ್ಥಳಗಳು ಕಡಿಮೆ.[೨]

ಜಿಲ್ಲಾ ಕೇಂದ್ರವಾಗಿರುವ ಈಗಿನ ಕೊಪ್ಪಳ ಪೂರ್ವ, ಪಶ್ಚಿಮ, ದಕ್ಷಿಣ ದಿಕ್ಕುಗಳಲ್ಲಿ ಬೆಟ್ಟಗಳಿಂದಾವೃತವಾಗಿದೆ. ಶಾಸನಗಳಲ್ಲಿ ಹಾಗೂ ಪ್ರಾಚೀನ ಕಾವ್ಯಗಳಲ್ಲಿ ಕೊಪ್ಪಳವನ್ನು ಕುಪಣ, ಕೊಪಣ, ಕೊಪಣನಗರ, ಕೊಪಣಾದ್ರಿ, ಕೊಪಣಾಚಲ ಎಂದು ಕರೆಯಲಾಗಿದೆ. ಬೆಟ್ಟಗಳ ಬುಡದಲ್ಲಿ ಬರುವ ಗ್ರಾಮವನ್ನು ಕುಪಣ, ಕೊಪಣ ಎಂದು ಗುರುತಿಸಿದರೂ ಕೊಪಣಾದ್ರಿ ಕುಪಣಾಚಲ ಎಂಬುದು ಸುತ್ತ-ಮುತ್ತಲ ಬೆಟ್ಟ-ಗುಡ್ಡಗಳಲ್ಲಿ ಯಾವುದು ಎಂಬುದನ್ನು ಗುರುತಿಸುವುದು ಕಷ್ಟದ ಕೆಲಸ. ಈ ಕೊಪಣವು ಕವಿರಾಜಮಾರ್ಗದಲ್ಲಿ ಹೇಳಲಾಗಿರುವ ತಿರುಳ್ಗನ್ನಡ ಪ್ರದೇಶದ ಪೂರ್ವಸೀಮೆಯಾಗಿದೆ. ಇದು ಜಿಲ್ಲಾ ಕೇಂದ್ರವಾಗಿ ಆಳ್ವಿಕೆ ನಡೆಸುತ್ತಿದ್ದು ಕೊಪ್ಪಳವು ಭೌಗೋಳಿಕವಾಗಿ ಉತ್ತರ ಅಕ್ಷಾಂಶ ೧೫°-೨೧ ಮತ್ತು ಪೂರ್ವರೇಖಾಂಶ ೭೬°-೧೦೦ರಲ್ಲಿ ವಿಸ್ತಾರಗೊಂಡಿದೆ.[೩]

ಕೊಪ್ಪಳ ಜಿಲ್ಲೆಗೆ ಸೇರಿದ ಅನೇಕ ಸ್ಥಳಗಳು ಪ್ರಾಚೀನ ನೆಲೆಗಳಾಗಿವೆ. ಅವುಗಳಲ್ಲಿಯೇ ಬೆಣಕಲ್ಲ, ಆನೆಗೊಂದಿ, ಮನ್ನಾಪುರ, ಇಂದರಗಿ, ಅಂಜನಹಳ್ಳಿ, ಬಂಡಿಹರ್ಲಾಪುರ, ವೆಂಕಟಾಪುರ ಮೊದಲಾದವುಗಳು ಸೇರಿವೆ. ಆನೆಗೊಂದಿ ಪ್ರದೇಶವು ಹಂಪಿ ಪರಿಸರದಲ್ಲಿ ಇರುವ ಕಿಷ್ಕಿಂದೆ, ಅಯೋಧ್ಯಾ, ಅಂಜನಾದ್ರಿ, ಶಬರಿಗುಹೆ, ಸೀತಾ ಸೆರಗು, ಸುಗ್ರೀವ ಗುಹೆಗಳು ರಾಮಾಯಣದ ಘಟನೆಗಳನ್ನು ನೆನಪಿಸುತ್ತವೆ. ಅಂತೆಯೇ ಪಾರ್ವತಿಯ ಕ್ಷೇತ್ರವೆಂದು ಹಂಪೆಯ ಹೇಮಕೂಟ, ಆನೆಗೊಂದಿ ಬಳಿಯ ಪಂಪಾ ಸರೋವರಗಳನ್ನು ಹೆಸರಿಸಲಾಗಿದೆ. ಕ್ರಿ.ಶ ೭ನೇ ಶತಮಾನದಲ್ಲಿ ಹಂಪೆಯ ಪಂಪಾಕ್ಷೇತ್ರ ಪಂಪಾತೀರ್ಥವೆಂದು

ಖ್ಯಾತಿ ಪಡೆದಿದ್ದು ಶಾಸನಗಳಲ್ಲಿ ಉಲ್ಲೇಖಗಳಿವೆ. ಈ ಮೇಲಿನ ಘಟನೆಗಳನ್ನು ಪೌರಾಣಿಕ ಅಂಶಗಳಾಗಿದ್ದರೆ ಪ್ರಾಕ್ಚಾರಿತ್ರಿಕ ನೈಜತೆಯನ್ನು ಸ್ಪಷ್ಟಪಡಿಸುವ ಆದಿಮಾನವನ ಗುಹೆಗಳು, ಗುಹೆಯ ಬಂಡೆಗಲ್ಲುಗಳ ಮೇಲಿನ ರೇಖಾಚಿತ್ರ, ವರ್ಣಚಿತ್ರಗಳು, ಭೂದೀಪಗಳು, ಬೃಹತ್ ಶಿಲಾಗೋರಿಗಳು, ಮಡಿಕೆ-ಕುಡಿಕೆ ಮೊದಲಾದ ಕುರುಹುಗಳು ಈ ಪ್ರದೇಶದಲ್ಲಿ ಕಂಡುಬರುತ್ತವೆ.

ಈ ಪ್ರದೇಶದ ಶಾಸನಗಳ ಇತಿಹಾಸ ಕ್ರಿ.ಪೂ ೩ನೇ ಶತಮಾನದ ಸಾಮ್ರಾಟ ಅಶೋಕನಿಂದ ಆರಂಭವಾಗಿ ಕ್ರಿ.ಶ ೧೮೦೦ರ ವರೆಗೆ ಮುಂದುವರೆದಿದೆ. ಕಾಲದಿಂದ ಕಾಲಕ್ಕೆ ವಿಭಿನ್ನ ಸಂಸ್ಕೃತಿಯ ಅರಸರ ಆಳ್ವಕೆಯಲ್ಲಿ ಸಿಕ್ಕಿ ಬಹಳಷ್ಟು ಶಾಸನಗಳು ನಾಶವಾಗಿರುವ ಸಾಧ್ಯತೆಗಳಿವೆ. ಇಷ್ಟಾದರೂ ಹಿಂದೆ ತಿಳಿಸಿದಂತೆ ಜಿಲ್ಲೆಯ ಪ್ರಾಕೃತಿಕ ಸನ್ನಿವೇಶಗಳ ಕಾರಣಗಳಿಂದ ಇಲ್ಲಿ ಹಿಂದಿನ ಕಾಲದಲ್ಲಿ ಜನವಸತಿ ಕಡಿಮೆ ಇದ್ದು ದೇವಾಲಯಗಳ ರಚನೆಯಂತೆ ಕಾರ್ಯಗಳು ಕೆಲವು ಸ್ಥಳಗಳಿಗೆ ಮಾತ್ರ ಸೀಮಿತವಾಗಿವೆ. ಹೀಗೆ ಕೊಪ್ಪಳ ಜಿಲ್ಲೆಯಲ್ಲಿ ಇತಿಹಾಸ ಪೂರ್ವಕಾಲದ ಅವಶೇಷಗಳು ದೊರೆತಿದ್ದು, ಕೊಪ್ಪಳ ಬಳಿಯ ಮಳೆಮಲ್ಲಪ್ಪಗುಡ್ಡ, ಹಿರೇಬೆಣಕಲ್ ಬೆಟ್ಟದ ಬೃಹತ್ ಶಿಲಾಯುಗದ ಗೋರಿಗಳು ಸಿಕ್ಕಿವೆ. ಇದನ್ನು ಮೋರೆರ ಅಂಗಡಿ ಅಥವಾ ಮೋರೆರ ಮನೆ ಎಂದು ಕರೆಯುತ್ತಾರೆ. ಇತಿಹಾಸ ಪೂರ್ವಕಾಲದ ಅವಶೇಷಗಳ ಹೊರತಾಗಿ ಮೌರ್ಯರ ಕಾಲದಿಂದ ಹಿಡಿದು ಪಾಳೆಗಾರರ ಕಾಲದವರೆಗೆ ಶಿಲಾ ಶಾಸನಗಳು ದೊರೆತಿವೆ. ಕೊಪ್ಪಳಕ್ಕೆ ಎರಡು ಸಾವಿರಕ್ಕೂ ಹೆಚ್ಚು ವರ್ಷಗಳ ಸುದೀರ್ಘ ಪರಂಪರೆ ಇದೆ. ಈ ನಗರದ ಪ್ರಾಚೀನತೆಗೆ ಸಾಕ್ಷಿಯೆಂಬಂತೆ ಇಲ್ಲಿನ ಕೋಟೆ, ಅಶೋಕನ ಶಾಸನಗಳು ಇವೆ. ಅಲ್ಲದೆ ಬಾದಾಮಿ ಚಾಲುಕ್ಯರಿಂದ ಹಿಡಿದು ನಿಜಾಮನ ಆಳ್ವಿಕೆಯವರೆಗಿನ ಇತಿಹಾಸವನ್ನು ಹೊಂದಿದೆ. ಅಲ್ಲದೆ ಬೌದ್ಧಜೈನಧರ್ಮಗಳ ಕೇಂದ್ರಸ್ಥಾನವಾಗಿತ್ತೆಂಬುದಕ್ಕೆ ಶಾಸನಗಳು ಸಾಕ್ಷಿಯಾಗಿ ನಿಂತಿವೆ.

ಸ್ಥಳೀಯ ಚರಿತ್ರೆಯ ನಿರ್ಮಿತಿ ಇಂದು ಹಲವು ಮಿತಿಗಳ ಒಂದು ತೊಡಕಿನ ಚಟುವಟಿಕೆಯಾಗಿದೆ. ಸ್ಥಳೀಯ ಚರಿತ್ರೆ ಎನ್ನುವುದು, ಸಂಸ್ಕೃತೀಕರಣ, ಆಧುನೀಕರಣ, ಜಾಗತೀಕರಣದಿಂದ ಆಗಿರುವ ಸಾಂಸ್ಕೃತಿಕ ಮಿಶ್ರಣ. ಪಾರಂಪಾರಿಕವಾಗಿ ಸ್ಥಳೀಯ ಸಂಸ್ಕೃತಿಯ ಹಲವಾರು ಜಾತಿ ಜನಾಂಗಗಳ ಸಂಸ್ಕೃತಿಗಳ ರೂಢಿಕೆಯಾಗಿದೆ. ಆಧುನಿಕತೆ ತನ್ನ ಸಮಾನತೆಯ ಕಾರ್ಯಕ್ರಮದಲ್ಲಿ ವಸಾಹತು ಪೂರ್ವದ ಸ್ಥಳೀಯತೆಯನ್ನು ಕರಗಿಸಿತು.[೪] ಮೌಖಿಕ ಆಧಾರವೆಂದರೆ ಬದುಕಿರುವ ಮಾನವರಿಂದ ಸಂಗ್ರಹಿಸಿರುವ ಆಧಾರ. ಹೀಗೆ ತಾತ್ವಿಕ ಹಿನ್ನೆಲೆಯಲ್ಲಿ ಸ್ಥಳೀಯ ಚರಿತ್ರೆಯನ್ನು ಕಟ್ಟಿಕೊಡಬಹುದಾಗಿದೆ. ಸಮಕಾಲೀನ ಸಾಂಸ್ಕೃತಿಕ ಮೌಲ್ಯ ಹಾಗೂ ಗ್ರಹಿಕೆಗಳ ಪುನರ್ ಮೌಲ್ಯೀಕರಣದ ಆಯಾಮಗಳೂ ಚರಿತ್ರೆಯ ಅಧ್ಯಯನಕ್ಕೆ ಈಗ ಸೇರ್ಪಡೆಯಾಗುತ್ತವೆ. ಚರಿತ್ರೆಯ ಬೆಳವಣಿಗೆಯ ಪ್ರಕ್ರಿಯೆಯಲ್ಲಿ ಪಾಲ್ಗೊಂಡು ತಮ್ಮದೇ ಆದ ಕೊಡುಗೆಯನ್ನು ಕೊಟ್ಟು, ಚರಿತ್ರೆಯಲ್ಲಿ ತಮಗೆ ನ್ಯಾಯವಾಗಿ ಲಭ್ಯವಾಗಬೇಕಾದ ಗಮನದಿಂದ ವಂಚಿತರಾಗಿ, ನಿರ್ಲಕ್ಷಿತರಾಗಿ ಉಳಿದ ಜನವರ್ಗಗಳೂ ಇವೆ. ಚರಿತ್ರೆಯ ವಾಸ್ತವಿಕ

ನೆಲೆಗಳನ್ನು ಹುಡುಕುವ ಕೆಲಸ ಅಕ್ಷರಶಃಸಂಸ್ಕೃತಿಯ ಆಚೆಗೇ ಉಳಿದಿರುವ ಜನಸಮುದಾಯಗಳ ಕಲಾತ್ಮಕ ಅಭಿವ್ಯಕ್ತಿಯಿಂದ ಮೌಖಿಕ ಆಕರಗಳ ನೆಲೆಯು ನಡೆಯಬೇಕಾಗಿದೆ. ಚರಿತ್ರೆ ಅಧ್ಯಯನ, ಸಂಶೋಧನೆಯ ರಚನಾ ವಿಧಾನದ ಕ್ರಮಗಳಲ್ಲಿ ಸ್ಥಳೀಯ ಚರಿತ್ರೆಯು ಒಂದಾಗಿದ್ದು ಚರಿತ್ರೆ ಅಧ್ಯಯನದ ಮಟ್ಟಿಗೆ ಇದು ವಿಶಿಷ್ಟ ಸ್ಥಾನಪಡೆದಿದೆ.[೫] ಇತಿಹಾಸದ ಸಂಶೋಧನಾ ವಿಧಾನವು ತನ್ನ ಮೂಲಧ್ಯೇಯವನ್ನು ಕಾಲಾನುಕ್ರಮದಂತೆ ವಿಶಿಷ್ಟ ರೀತಿಯಲ್ಲಿ ಬದಲಾಯಿಸಿಕೊಳ್ಳುತ್ತಾ ಹೋಗುತ್ತಿದೆ. ಇದರಿಂದಾಗಿ ಇತ್ತೀಚೆಗೆ ಇತಿಹಾಸವು ತನ್ನ ಅಧ್ಯಯನದ ವ್ಯಾಪ್ತಿಯಲ್ಲಿ ಬೃಹತ್ ಪ್ರಮಾಣದಲ್ಲಿ ವಿಕಾಸ ಹೊಂದುತ್ತಾ ಹೋಗುತ್ತಿದೆ. ನಮ್ಮ ನಾಡಿನ ಹಲವಾರು ಪ್ರದೇಶಗಳ ಜಿಲ್ಲೆ ಸಂಸ್ಥೆಗಳ ಹಾಗೂ ವಿವಿಧ ಜನಾಂಗಗಳ ವಿಶಿಷ್ಟವಾದಂತಹ ಇತಿಹಾಸವನ್ನು ಹೊರಚೆಲ್ಲಲು ಪ್ರಾಚೀನ ಸಂಶೋಧನೆಯ ಅವಶ್ಯಕತೆ ಇದೆ.[೬]

ಜಗತ್ತಿನಾದ್ಯಂತ ಅಮೇರಿಕಾದ ಏಕಸ್ವಾಮ್ಯತೆ ಹೆಚ್ಚುತ್ತಿದೆ. ಅದರ ಸಾಮ್ರಾಜ್ಯಶಾಹಿ ಆಕಾಂಕ್ಷೆಗಳು ಅನಂತವಾಗತೊಡಗಿವೆ. ವಿಶ್ವದ ಮೂರನೆಯ ರಾಷ್ಟ್ರಗಳು ನವವಸಾಹತೀಕರಣದ ಪ್ರಕ್ರಿಯೆಗೆ ತೀವ್ರವಾಗಿ ಒಳಪಡುತ್ತಿವೆ. ಇಂಥ ಸಂದರ್ಭದಲ್ಲಿ ಮಾನವಿಕ ವಿಜ್ಞಾನ ಶಿಸ್ತುಗಳ ಅಧ್ಯಯನದ ಆಶಯಗಳು ಯಾವ ನಿಟ್ಟಿನತ್ತ ಕ್ರಮಿಸಬೇಕೆಂಬುದು ಬಹುದೊಡ್ಡ ಸಮಸ್ಯೆಯಾಗಿದೆ. ಈ ನವವಸಾಹತೀಕರಣದ ಹಿನ್ನಲೆಯಲ್ಲಿ ಜಾಗತೀಕರಣ ಪ್ರಕ್ರಿಯೆ ನಡೆಯುತ್ತಿದೆ. ಮುಂದುವರಿದ ರಾಷ್ಟ್ರಗಳು ಜಾಗತೀಕರಣವೆಂಬ ಮಂತ್ರವನ್ನು ಹಿಡಿದು ಏಕೀಕೃತ ಘಟಕ ವ್ಯವಸ್ಥೆಯನ್ನು ರೂಪಿಸಿಕೊಳ್ಳುವ ಮಹತ್ವವಾದ ಹುನ್ನಾರವನ್ನು ಹೊಂದಿವೆ. ಈ ಹಿನ್ನೆಲೆಯಲ್ಲಿ ಭಾಷೆ ಸಂಸ್ಕೃತಿಗಳು ನಾಶವಾಗುವುದರಲ್ಲಿ ಸಂಶಯವಿಲ್ಲ. ಪ್ರಪಂಚದಾದ್ಯಂತ ಏಕ ಸಂಸ್ಕೃತಿಗೆ ಪೂರಕವಾದಂಥ ಪ್ರತಿ ಪರಿಕರಗಳನ್ನು ಏಕಘಟಕ ವ್ಯವಸ್ಥೆ ಮಾಡಿ ತರುವ ಪ್ರಯತ್ನವನ್ನು ಮುಂದುವರೆದ ರಾಷ್ಟ್ರಗಳು ಮಾಡುತ್ತಿವೆ.[೭] ಹೀಗಾಗಿ ಬಹುರಾಷ್ಟ್ರೀಯ ಕಂಪನಿಗಳು ಭಾರತಕ್ಕೆ ಬಂದು ನೆಲೆಗೊಳ್ಳುತ್ತಿವೆ. ಈ ಹಿನ್ನೆಲೆಯಲ್ಲಿ ಭಾರತದ ಮೂರನೆಯ ಜಾಗತಿಕ ರಾಷ್ಟ್ರಗಳ ಬೌದ್ಧಿಕತೆಯನ್ನು ಬಹುರಾಷ್ಟ್ರೀಯ ಕಂಪನಿಗಳು ಕೊಳ್ಳೆಹೊಡೆಯುತ್ತಿವೆ. ಇದರ ಪರಿಣಾಮ ಭಾರತದಲ್ಲಿ ಮುಂದೊಂದಿನ ಐರೋಪ್ಯ ಸಂಸ್ಕೃತಿ ತನ್ನ ಪ್ರಭಾವವನ್ನು ಬೀರಿ ಹಲವು ಪ್ರಾದೇಶಿಕ ಭಾಷೆಗಳ ವಿನಾಶಕ್ಕೆ ಕಾರಣವಾಗುತ್ತಿದೆ. ನಾವು ಯಾವುದನ್ನು ದೇಸಿ ಸಂಸ್ಕೃತಿ ಎಂದು ಕರೆದುಕೊಳ್ಳುತ್ತಿದ್ದೇವೆಯೋ, ಅದು ನಮ್ಮಿಂದ ದಿನೇ ದಿನೇ ದೂರವಾಗುತ್ತಿದೆ. ಇಂತಹ ಸಂದರ್ಭದಲ್ಲಿ ದೇಶಿ ಸಂಸ್ಕೃತಿಯ ಮೌಲ್ಯವನ್ನು ಚರ್ಚಿಸಬೇಕಾದ ಅಗತ್ಯ ನಮ್ಮ ಮುಂದಿದೆ. ಈ ಪ್ರದೇಶವು ಇಂದು ಜಾಗತೀಕರಣದ ಪ್ರಕ್ರಿಯೆಗೆ ಒಳಗಾಗುತ್ತಿದೆ. ಇಂಥ ಸಂದಿಗ್ಧ ಸ್ಥಿತಿಯಲ್ಲಿ ಕೊಪ್ಪಳ ಜಿಲ್ಲೆಯಾದ್ಯಂತ ಇರುವ ಐತಿಹಾಸಿಕ ಸ್ಥಳಗಳ ಸಂಸ್ಕೃತಿಯನ್ನು ಉಳಿಸಿಕೊಂಡು ಹೋಗುವುದು ಅತಿ ಅವಶ್ಯಕವಾಗಿದೆ.

**ಟಿಪ್ಪಣಿಗಳು :**

೧. ಡಾ.ಶೀಲಾಕಾಂತ ಪತ್ತಾರ **ಬಾದಾಮಿ ಸಾಂಸ್ಕೃತಿಕ ಅಧ್ಯಯನ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦, ಪುಟ ೧

೨. ಡಾ.ದೇವರ ಕೊಂಡಾರೆಡ್ಡಿ (ಸಂ), **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೨, ಕೊಪ್ಪಳ ಜಿಲ್ಲೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯, ಪುಟ ೨೩

೩. ಡಾ.ಕೆ.ಎಂ.ಸುರೇಶ (ಸಂ), **ಕರ್ನಾಟಕ ದೇವಾಲಯ ಕೋಶ ಕೊಪ್ಪಳ ಜಿಲ್ಲೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧, ಪುಟ ೧೮

೪. ಪ್ರೊ.ಲಕ್ಷ್ಮಣ್ ತೆಲಗಾವಿ, (ಸಂ) **ಸ್ಥಳೀಯ ಚರಿತ್ರೆ ಅಧ್ಯಯನ ತಾತ್ವಿಕತೆ ಮತ್ತು ಸ್ವರೂಪ**, ಡಾ. ಶಿವರಾಮ ಶೆಟ್ಟಿಯವರ (ಲೇ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩, ಪುಟ ೪೫ - ೪೬

೫. ಡಾ.ವಿರೂಪಾಕ್ಷಿ ಪೂಜಾರಹಳ್ಳಿಯವರ (ಲೇ), ಅದೇ, ಪುಟ ೧೪

೬. ಡಾ.ಎನ್.ಚಿನ್ನಸ್ವಾಮಿ ಸೋಸಲೆಯವರ (ಲೇ), ಅದೇ ಪುಟ ೫೫ - ೫೬

೭. ಡಿ.ಎಸ್.ಅಶ್ವಥ ಅವರ **ಕೊಪ್ಪಳ: ಒಂದು ಸಾಂಸ್ಕೃತಿಕ ಅಧ್ಯಯನ** (ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ), ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧, ಪುಟ ೧ - ೭

# ಎರಡು

## ಅಧ್ಯಯನದ ಉದ್ದೇಶ, ಪ್ರಾಮುಖ್ಯತೆ ಹಾಗೂ ವ್ಯಾಪ್ತಿ

ಅಧ್ಯಯನದ ಉದ್ದೇಶ

ಅಧ್ಯಯನದ ಪ್ರಾಮುಖ್ಯತೆ

ಅಧ್ಯಯನದ ವ್ಯಾಪ್ತಿ

ಇದುವರೆಗೂ ಕೊಪ್ಪಳ ಜಿಲ್ಲೆಯ ಕುರಿತು ನಡೆದಿರುವ ಅಧ್ಯಯನಗಳು

ಎರಡು

## ಅಧ್ಯಯನದ ಉದ್ದೇಶ, ಪ್ರಾಮುಖ್ಯತೆ ಹಾಗೂ ವ್ಯಾಪ್ತಿ

ಕರ್ನಾಟಕದಲ್ಲಿ ಕೊಪ್ಪಳ ನಾಡಿಗೆ ಹೆಮ್ಮೆಪಡುವಂತಹ ಪ್ರಾಚೀನತೆ ಇದ್ದಂತೆ ಅರ್ವಾಚಿನ ಇತಿಹಾಸದಲ್ಲಿಯೂ ಅದಕ್ಕೊಂದು ಗಣನೀಯವಾದ ಸ್ಥಾನವಿದೆ. ಪಾಲ್ಕಿಗುಂಡಿನ ಅಶೋಕನ ಶಾಸನ ಕಾಲದ ನಂತರ ಮಹಾಕೊಪಣ ನಗರದ ನಾಡು ತಿರುಳ್ಗನ್ನಡ ನಾಡೆಂದು ವಿದಿತವಾಗಿ ನೃಪತುಂಗನ ಕಾಲದಲ್ಲಿ ಮೆರೆದು ಹತ್ತೊಂಬತ್ತನೆಯ ಶತಮಾನದಲ್ಲಿ ಮತ್ತೆ ತಲೆಯೆತ್ತಿ ತನ್ನ ಅಸ್ತಿತ್ವವನ್ನು ಬೆಳೆಸಿಕೊಂಡಿದ್ದನ್ನು ಕಾಣುತ್ತೇವೆ.

**ಅಧ್ಯಯನದ ಉದ್ದೇಶ :**

ಕರ್ನಾಟಕದ ಇತಿಹಾಸದಲ್ಲಿ ಕೊಪ್ಪಳ ಜಿಲ್ಲೆಯ ಇತಿಹಾಸವು ಮಹತ್ವದಿಂದ ಕೂಡಿದ್ದು ಈ ಜಿಲ್ಲೆಯು ಹಿಂದುಳಿದ ಹಾಗೂ ಬರಗಾಲದಿಂದ ಕೂಡಿದ ಪ್ರದೇಶವಾಗಿದೆ. ಆದರೆ ಐತಿಹಾಸಿಕ ಶ್ರೀಮಂತಿಕೆಯ ಪರಂಪರೆಯಲ್ಲಿ ಉನ್ನತ ಸ್ಥಾನವನ್ನು ಪಡೆದುಕೊಂಡಿದೆ. ಈ ಪ್ರದೇಶದ ಹಿಂದುಳಿದಿರುವಿಕೆಗೆ ಮುಖ್ಯ ಕಾರಣವೆಂದರೆ ಶಿಕ್ಷಣ, ಬಡತನ, ಹೆಚ್ಚುತ್ತಿರುವ ಜನಸಂಖ್ಯೆ, ನಿರುದ್ಯೋಗ ಹಾಗೂ ಸರಕಾರದ ನಿರ್ಲಕ್ಷ್ಯ ಧೋರಣೆ ಕಾರಣವಾಗಿದೆ. ಇಲ್ಲಿನ ಭೂಮಿಯು ಒಣಪ್ರದೇಶದಿಂದ ಕೂಡಿದ್ದು ಮಳೆಯನ್ನು ಆಶ್ರಯಿಸಿ ವ್ಯವಸಾಯ ಮಾಡುವುದು ಇಲ್ಲಿನ ರೈತರ ಬದುಕಾಗಿದೆ.

ಜಿಲ್ಲೆಯಲ್ಲಿ ಗಂಗಾವತಿ ತಾಲೂಕು ತುಂಗಭದ್ರಾ ನದಿಯ ಅಣೆಕಟ್ಟೆಯಿಂದಾಗಿ ಕೃಷಿಗಾಗಿ ನೀರಾವರಿಯನ್ನು ಹೊಂದಿದ್ದು, ಯಲಬುರ್ಗಾ, ಕುಷ್ಟಗಿ, ಕೊಪ್ಪಳ ತಾಲೂಕುಗಳು ತೀವ್ರ ಹಿಂದುಳಿದ ಬರಗಾಲದ ಪ್ರದೇಶವಾಗಿವೆ. ಜಿಲ್ಲೆಯ ಅಭಿವೃದ್ಧಿಗೆ ಬಡತನ, ಶಿಕ್ಷಣದ ಕೊರತೆ, ಆರ್ಥಿಕ ಸ್ಥಿತಿಗತಿಗಳು ಅಡ್ಡಿಮಾಡುತ್ತಿವೆ. ನಿರಂತರ ಜಾಗತೀಕರಣದ ಒತ್ತಡದಿಂದ ಹಾಗೂ ಈ ಪ್ರದೇಶದಲ್ಲಿ ಬೆಳೆಯುತ್ತಿರುವ ಕೈಗಾರಿಕೀಕರಣಗಳಿಂದ ನಮ್ಮ ಪ್ರಾಚೀನ ಸಂಸ್ಕೃತಿಯ ಸ್ಮಾರಕಗಳ ಸ್ಥಿತಿ ಶೋಚನೀಯವಾಗಿದೆ.

ಈ ಪ್ರದೇಶದ ಇತಿಹಾಸವನ್ನು ಅರ್ಥೈಸಿಕೊಂಡಾಗ ಶಾಸನಗಳಲ್ಲಿ ಕೊಪಣ ಎಂದು ಹಾಗೂ ಕಾವ್ಯಗಳಲ್ಲಿ ಪ್ರಾಚೀನ ನೆಲೆಗಳ ಬೀಡು ಎಂದು ವರ್ಣಿಸಲಾಗಿದೆ. ಕೊಪ್ಪಳ ಜಿಲ್ಲೆಯ ಸಾಂಸ್ಕೃತಿಕ ಅಧ್ಯಯನದಿಂದ ನಮ್ಮ ಸಂಸ್ಕೃತಿ ಮತ್ತು ಚರಿತ್ರೆಗಳಿಗೆ ಸಂಬಂಧಿಸಿದಂತೆ ವಾಸ್ತವಿಕ ಅಂಶಗಳನ್ನು ಗುರುತಿಸಲು ಸಾಧ್ಯವಾಗುತ್ತದೆ. ಈ ಅಧ್ಯಯನದ ಸಂದರ್ಭದಲ್ಲಿ ಮೂಲ ಹಾಗೂ ಅನುಷಂಗಿಕ ಆಕರಗಳು ಕೊಪ್ಪಳ ಜಿಲ್ಲೆಯ ಅಂದಿನ ಕಾಲದ ಚಾರಿತ್ರಿಕ ಹಾಗೂ ಸಾಂಸ್ಕೃತಿಕ ವಿಚಾರಗಳ ಬಗೆಗೆ ನಿಖರವಾದ ಸ್ಪಷ್ಟತೆಯನ್ನು ಪಡೆಯಲು ವಿಪುಲವಾದ ಸಾಮಾಗ್ರಿಯನ್ನು ಒದಗಿಸಿವೆ. ಸಂಗ್ರಹಿಸಿದ ಮಾಹಿತಿಗಳನ್ನು ಇದುವರೆಗೂ ನಡೆಸಿರುವ ಚರ್ಚೆಯ ಬೆಳಕಿನಲ್ಲಿ ಪುನರ್ ಅವಲೋಕನಕ್ಕೆ ಗುರಿಪಡಿಸಲಾಗಿದೆ. ಇಷ್ಟೆಲ್ಲಾ ಇತಿಹಾಸವನ್ನು ಹೊಂದಿರುವ ಇದನ್ನು ಪ್ರಸ್ತುತ ಅಧ್ಯಯನದ ಉದ್ದೇಶವಾಗಿ ಈ ಸ್ಥಳೀಯ ಸಾಂಸ್ಕೃತಿಕ ಪರಂಪರೆಯ ಆದರ್ಶ ಮೌಲ್ಯಗಳನ್ನು ಶೋಧಿಸಿ ನೈಜತೆಯಿಂದ ಸಂಶೋಧನೆ ಕೈಗೊಳ್ಳುವುದಾಗಿದೆ. ಇಂದಿನ ಸಮಾಜಕ್ಕೆ ಇತಿಹಾಸದ ಪ್ರಜ್ಞೆ ಅದರ ವೈಶಿಷ್ಟ್ಯತೆಯನ್ನು ಹಾಗೂ ಪ್ರಾಚೀನತೆಯಿಂದ ಆಧುನಿಕದವರೆಗೂ ಅನೇಕ ಸಂಸ್ಕೃತಿಯ ವಿಭಿನ್ನ ಸ್ವರೂಪದಲ್ಲಿ ಐಕ್ಯತೆಯ ಭಾವನೆಗಳು ಹಿಂದೂ-ಮುಸ್ಲಿಮರ ಭಾವೈಕ್ಯತಾಣಗಳ ಮಹತ್ವವನ್ನು ತಿಳಿಸುವುದಾಗಿದೆ. ಶೌರ್ಯ, ದಾನ, ತ್ಯಾಗ, ಬಲಿದಾನ, ಧರ್ಮ ಸಹಿಷ್ಣತೆ, ಸ್ಮಾರಕಗಳು, ಶಾಸನಗಳು, ವೀರಗಲ್ಲುಗಳು, ಮಾಸ್ತಿಗಲ್ಲುಗಳು ದೇಶಕ್ಕಾಗಿ ಹೋರಾಡಿದ ವೀರರ ಇತಿಹಾಸವು ಪ್ರಾಚೀನ ಸಂಸ್ಕೃತಿಯ ನೆನಪನ್ನು ತಂದುಕೊಡುತ್ತವೆ.

ಇಂಥ ಶ್ರೇಷ್ಠ ಮಾದರಿಯ ಪ್ರಾಗೈತಿಹಾಸಿಕ ಇತಿಹಾಸ ಕಾಲದ ಪರಂಪರೆ, ಇಂದಿನ ಸಮಾಜದ ನಾಗರಿಕತೆಯಲ್ಲಿ ಅಡಗಿರುವ ವಿಧ್ವಂಸಕ ಶಕ್ತಿ ಹಾಗೂ ಹೆಚ್ಚಾಗುತ್ತಿರುವ ಮಾನವರ ಸ್ವಚ್ಛಂದ ಪ್ರವೃತ್ತಿ ಮತ್ತು ನಾವು ನಮ್ಮದು, ನಮ್ಮ ಜನಾಂಗ ಜಾತೀಯತೆ ನಮ್ಮ ಸಮಾಜ ಎಂದು ಪ್ರತಿಯೊಬ್ಬರು ಸ್ವಾರ್ಥ ನಿಲುವುಗಳಿಂದ ಯೋಚಿಸುತ್ತಾ ಹೋದರೆ ನಮ್ಮ ಗತವೈಭವದ ಪರಂಪರೆಯನ್ನು ಉಜ್ವಲ ವಾಸ್ತವಿಕ ಮಾದರಿಗಳ ಇತಿಹಾಸವು ಜೀವಂತವಾಗಿ ಮತೀಯ ಭಾವನೆಗೆ ಬಲಿಯಾಗುವ ದಿನಗಳು ಹತ್ತಿರವಾಗುತ್ತಿವೆ. ಒಂದು ಅರ್ಥದಲ್ಲಿ ಹೇಳುವುದಾದರೆ "ಭಾರತವು ಹಲವಾರು ಭಾರತದಿಂದ ಕೂಡಿದೆ" ಎಂಬ ಮಾತನ್ನು ಸಮರ್ಥಿಸುವಂತೆ ಪ್ರಾಚೀನತೆಯಿಂದ ಆಧುನಿಕ ಭಾರತದವರೆಗೂ ಅದ್ಭುತ ಸ್ಮಾರಕಗಳು, ಪ್ರಾಚೀನ ಗತವೈಭವದ ಸಾಂಸ್ಕೃತಿಕ ಪರಂಪರೆಯ ದೇವಾಲಯಗಳು ಭಾರತದಲ್ಲಿವೆ. ಧರ್ಮದ ಹೆಸರಿನಲ್ಲಿ ರಾಜಕೀಯ ಲಾಭವನ್ನು ಪಡೆಯುತ್ತಿರುವ ಮೂಲಭೂತವಾದಿಗಳು ಕೇವಲ ಧರ್ಮದ ವಿರುದ್ಧವಾಗಿ ಐತಿಹಾಸಿಕ ಸ್ಮಾರಕಗಳ ಮೇಲೆ ಬಾಂಬು ದಾಳಿಗಳ ಗುರಿಯನ್ನಾಗಿಟ್ಟುಕೊಂಡು ದೇಶದಲ್ಲಿ ಕೋಮು ಸೌಹಾರ್ದತೆಯನ್ನು ಹಾಳುಮಾಡಿ ಮತೀಯ ಭಾವನೆಗಳನ್ನು ಹುಟ್ಟಿಸುತ್ತಿವೆ. ಇಂಥ ಸಂದರ್ಭದಲ್ಲಿ ಮೂಲಭೂತವಾದಿಗಳ ಪ್ರಚೋದನೆಯಿಂದ ಜಾತಿಸಂಘರ್ಷಗಳು ಉಂಟಾಗಿ ಅನೇಕ ಸ್ಮಾರಕಗಳು ನಾಶವಾಗುವುದರಲ್ಲಿ ಸಂದೇಹವಿಲ್ಲ. ಸಮಾಜದಲ್ಲಿರುವ ಪೂರ್ವಾಗ್ರಹ ಪೀಡಿತದ ವಿಚಾರಗಳನ್ನು ಹೋಗಲಾಡಿಸಿ ಮೊಟ್ಟಮೊದಲು ಇತಿಹಾಸ ಪ್ರಜ್ಞೆಯನ್ನು ಮೂಡಿಸಬೇಕಾಗಿರುವುದು ಪ್ರಜ್ಞಾವಂತ ನಾಗರಿಕರ ಕರ್ತವ್ಯವಾಗಿದೆ. ಇತಿಹಾಸದ ಘಟನೆ ಅಥವಾ ನಮ್ಮ ನೆಲದಲ್ಲಿ ವೀರತನದಿಂದ ಹೋರಾಡಿದ

ಸಾಮಾನ್ಯ ಜನತೆಯಿಂದ ಸಾಮ್ರಾಟರ ಹೋರಾಟದ ನೆನಪುಗಳನ್ನು ಸಮಾಜಕ್ಕೆ ಅರಿವು ಮೂಡಿಸುವುದು ಅಧ್ಯಯನದ ಪ್ರಮುಖ ಉದ್ದೇಶವಾಗಿದೆ. ಹಾಗೆಯೇ ಕೊಪ್ಪಳ ಜಿಲ್ಲೆಯ ಪ್ರಮುಖ ಪ್ರದೇಶಗಳಲ್ಲಿ ಭಾವೈಕ್ಯತೆಯ ತಾಣಗಳು ಸಾಕಷ್ಟಿವೆ. ಕೊಪ್ಪಳ ನಗರದಲ್ಲಿ ಜೈನರ ಬಸದಿಗಳು, ಗವಿಮಠ, ಶಿರಸಪ್ಪಯ್ಯನ ಮಠ, ದರ್ಗಾಗಳು ಇವೆ. ಈ ಐತಿಹಾಸಿಕ ಸ್ಥಳಗಳಲ್ಲಿ ಅನಾದಿಕಾಲದಿಂದಲೂ ನಡೆದು ಬರುತ್ತಿರುವ ಜಾತ್ರೆ, ಉತ್ಸವ, ಉರುಸುಗಳಲ್ಲಿ ಯಾವುದೇ ಬೇದಭಾವವಿಲ್ಲದೆ, ಹಿಂದೂ-ಮುಸ್ಲಿಮರು ಶ್ರದ್ಧಾಭಕ್ತಿಯಿಂದ ಭಾಗವಹಿಸುವುದು ಈ ಭಾಗದ ವಿಶೇಷ ಪರಂಪರೆಯಾಗಿದೆ.

ಕೊಪ್ಪಳ ಜಿಲ್ಲೆಯ ಯಲಬುರ್ಗಾ ತಾಲೂಕಿನ ಕುದರಿಮೋತಿ ಗ್ರಾಮದಲ್ಲಿ ಜರುಗುವ ಮೊಹರಂ ಹಬ್ಬವು ಹಿಂದೂ-ಮುಸ್ಲಿಮರ ಭಾವೈಕ್ಯತೆಯ ಸಂಕೇತವಾಗಿದೆ. ಮೊಹರಂ ಹಬ್ಬದ ದಿನದಂದು ಈ ಭಾಗಕ್ಕೆ ಕರ್ನಾಟಕ ರಾಜ್ಯದ ಜನತೆಯಲ್ಲದೆ ಇತರ ರಾಜ್ಯಗಳಿಂದ ಬಂದು ಹಬ್ಬವನ್ನು ಆಚರಿಸುವ ಸಂಸ್ಕೃತಿಯನ್ನು ಇಂದಿಗೂ ನೋಡಬಹುದಾಗಿದೆ. ಅದೇ ರೀತಿ ಕುಷ್ಟಗಿ, ಗಂಗಾವತಿ ತಾಲೂಕುಗಳಲ್ಲಿ ಜರುಗುವ ಅನೇಕ ಉತ್ಸವ, ಜಾತ್ರೆ, ಉರುಸುಗಳಲ್ಲಿ ಎಲ್ಲ ಧರ್ಮೀಯರು ಭಾವೈಕ್ಯತೆಯಿಂದ ಭಾಗವಹಿಸುವ ಸಂಪ್ರದಾಯವನ್ನು ಇಂದಿಗೂ ನಡೆಸಿಕೊಂಡು ಬಂದಿದ್ದಾರೆ. ಆದರೆ ಇತ್ತೀಚಿನ ದಿನಗಳಲ್ಲಿ ಮೂಲಭೂತವಾದಿಗಳ ವೈಯಕ್ತಿಕ ಸಂಘಟನೆಗಳು ಹುಟ್ಟಿಕೊಂಡು ಧರ್ಮದ ಹೆಸರಿನಲ್ಲಿ ಭವ್ಯ ಪರಂಪರೆಯ ಭಾವೈಕ್ಯತೆಯ ಐತಿಹಾಸಿಕ ತಾಣಗಳ ಬಗ್ಗೆ ಸಮಾಜದಲ್ಲಿ ನೈಜ ಇತಿಹಾಸವನ್ನು ತಿದ್ದಲು ಪ್ರಯತ್ನಿಸುತ್ತಿವೆ. ಇದು ಸಮಾಜಕ್ಕೆ ಅಪಾಯಕಾರಿ ಬೆಳವಣಿಗೆ ಎಂದು ಭಾವಿಸಬೇಕಾಗುತ್ತದೆ. ಆದ್ದರಿಂದ ಇಂತಹ ಸನ್ನಿವೇಶದಲ್ಲಿ ಇತಿಹಾಸ ಪ್ರಜ್ಞೆ ಅವಶ್ಯಕವಾಗಿದೆ. ನಮ್ಮ ಬದುಕಿನ ಒಂದು ಆದರ್ಶ ಮುನ್ನುಡಿಯಾಗಿ ಗತವೈಭವದ ಪರಂಪರೆಯನ್ನು ಒಳ್ಳೆಯ ನಿರ್ಮಲ ಮನಸ್ಸಿನಿಂದ ಉಳಿಸಿಕೊಂಡು ಹೋಗುವುದು ನಮೆಲ್ಲರ ಕರ್ತವ್ಯವಾಗಿದೆ. ಹಾಗೂ ಯಾವುದೇ ಇತಿಹಾಸದ ವ್ಯಕ್ತಿನಿಷ್ಠೆಗೆ ಬೆಲೆಕೊಡದೆ ವಸ್ತು ನಿಷ್ಠತೆಯಿಂದ ನೋಡುವ ಒಂದು ವಿಶಾಲವಾದ ದೃಷ್ಟಿಕೋನವನ್ನು ಬೆಳೆಸಿಕೊಂಡು ಹೋಗುವುದು ಪ್ರಸ್ತುತ ಅಧ್ಯಯನದ ಪ್ರಮುಖ ಉದ್ದೇಶವಾಗಿದೆ.

**ಅಧ್ಯಯನದ ಪ್ರಾಮುಖ್ಯತೆ :**

ಕೊಪ್ಪಳ ಶಿಲಾಯುಗದ ಕಾಲದಲ್ಲಿ ಜನವಸತಿ ಇದ್ದ ಬಗ್ಗೆ ಅನೇಕ ಪ್ರಾಕ್ಚಾರಿತ್ರಿಕ ಆಧಾರಗಳು ದೃಢೀಕರಿಸಿವೆ. ಈ ದೃಷ್ಟಿಯಿಂದ ಇದು ಎರಡು ಸಾವಿರಗಳಷ್ಟು ಇತಿಹಾಸವನ್ನು ಹೊಂದಿರುವ ಪ್ರದೇಶವಾಗಿದೆ. ಈ ಪ್ರದೇಶವು ಅನೇಕ ರಾಜಮನೆತನಗಳ ಆಳ್ವಿಕೆಗೆ ಒಳಪಟ್ಟಿದೆ ಎಂಬುದನ್ನು ಇಲ್ಲಿಯ ಸ್ಮಾರಕಗಳು, ಶಾಸನಗಳು, ಐತಿಹಾಸಿಕ ದೇವಾಲಯಗಳು, ಅಗ್ರಹಾರಗಳು, ಕೋಟೆಗಳು ಅಶೋಕನ ಶಾಸನಗಳು, ಜೈನರ ಬಸದಿಗಳು, ಬೌದ್ಧ ವಿಹಾರಗಳು ಮತ್ತು ಗೋರಿಗಳು ದೃಢಪಡಿಸುತ್ತವೆ. ಈ ಪ್ರದೇಶವು ಪ್ರಾಚೀನ ಸ್ಮಾರಕಗಳು, ಆದಿಮಾನವರು ವಾಸಿಸಿದ ಗವಿಗಳು, ಮಡಿಕೆ-ಕುಡಿಕೆಗಳು ರಾಮಾಯಣ ಮತ್ತು ಮಹಾಭಾರತ ಕಾಲದಿಂದಲೂ ಪ್ರಸಿದ್ಧಿಯಾದ ಐತಿಹಾಸಿಕ ಸ್ಥಳಗಳ ಘಟನೆಗಳು ಇಂದಿಗೂ ನೆನಪಿಸುತ್ತವೆ.

ಕೊಪ್ಪಳನಾಡಿನ ಇತಿಹಾಸವು ಅಶೋಕನಿಂದ ಆರಂಭವಾದ ಶಾಸನಗಳು ಪ್ರಮುಖವಾದ ಶಾಸನಗಳನ್ನು ಹೊಂದಿರುವ ಗವಿಮಠ ಸಮೀಪದ ಬಂಡೆಯೊಂದರ ಮೇಲೆ ಮತ್ತು ಮಳೆ ಮಲ್ಲೇಶ್ವರದ ಬಳಿ ಪಾಲ್ಕಿಗುಂಡಿನಲ್ಲಿರುವ ಅಶೋಕನ ಶಾಸನಗಳು ತೃಟಿತವಾಗಿವೆ. ಕೊಪ್ಪಳ ಜಿಲ್ಲೆಯು ಪ್ರಾಚೀನತೆಯಿಂದ ನಿಜಾಮರ ಆಳ್ವಿಕೆಯವರೆಗೆ ಅನೇಕ ಸ್ಮಾರಕಗಳು ದೇವಾಲಯಗಳನ್ನು ಹೊಂದಿದೆ. ಇಟಗಿ ಮಹಾದೇವ ದೇವಾಲಯ ಈ ಪ್ರದೇಶದ ಪ್ರಾಚೀನತೆಯ ಭವ್ಯ ಪರಂಪರೆಯನ್ನು ನೆನಪಿಸುತ್ತದೆ. ಆ ಕಾಲದ ಅರಸರ ಅಧಿಕಾರದ ಅವಧಿಯಲ್ಲಿ ಅನೇಕ ಅರಸರು ತಮ್ಮ ವಿಜಯೋತ್ಸವ ಹಾಗೂ ಅಂದಿನ ಒಟ್ಟು ಸಾಮಾಜಿಕ, ರಾಜಕೀಯ, ಆರ್ಥಿಕ, ಧಾರ್ಮಿಕ ವಿವರ ಐಚಿತ್ರಣಗಳ ಮಾಹಿತಿಯನ್ನು ಶಾಸನಗಳಲ್ಲಿ ಇತರ ಸ್ಮಾರಕಗಳಲ್ಲಿ ಉಲ್ಲೇಖಿಸಿದ ಬಗ್ಗೆ ಮಾಹಿತಿ ದೊರೆಯುತ್ತದೆ. ಅಷ್ಟೇ ಅಲ್ಲದೆ ಕೊಪ್ಪಳ ಇತಿಹಾಸದಲ್ಲಿ ಐತಿಹಾಸಿಕ ಕಥನಗಳನ್ನು ಸಾರುವ ಶಿಲ್ಪ ಚಿತ್ರಗಳಿವೆ. ಬೃಹತ್ ಕೋಟೆಗಳಿವೆ. ಗುಹೆಗಳು ದರ್ಗಾಗಳಿವೆ. ಕೊಪ್ಪಳಕ್ಕೊಂದು ಮುಕುಟವಾಗಿ ಕೊಪ್ಪಳದ ಪ್ರಾಕೃತಿಕ ಶ್ರೀಮಂತಿಕೆಗೆ ಹೆಸರುವಾಸಿಯಾಗಿರುವ 'ಕಿಲ್ಲೆ' ಇದೆ.

ರಾಜ್ಯ ರಕ್ಷಣೆಗಾಗಿ ಹೋರಾಡಿ ಮರಣ ಹೊಂದಿದ ವೀರರ ಸ್ಮರಣಾರ್ಥವಾಗಿ ನಿಲ್ಲಿಸಿದ ಕಲ್ಲುಗಳನ್ನು ವೀರಗಲ್ಲುಗಳೆಂದು ಕರೆಯಲಾಗುತ್ತದೆ. ಇದರಿಂದ ಇಲ್ಲಿನ ವೀರತನದಿಂದ ಹೋರಾಡಿದ ಭೂಮಿಯನ್ನು ಪುಣ್ಯಭೂಮಿ ಎಂದು ಕರೆಯುವ ವಾಡಿಕೆಯಿದೆ. ಇಲ್ಲಿನ ಇತಿಹಾಸದ ಪರಂಪರೆಯ ಸ್ಮಾರಕಗಳು ಗತಕಾಲದ ಇತಿಹಾಸದ ವೈಭವವನ್ನು ಸಾರಿ ಹೇಳುತ್ತವೆ.

೧೮ನೆಯ ಶತಮಾನದ ಕರ್ನಾಟಕದಲ್ಲಿ ಬ್ರಿಟೀಷರ ವಿರುದ್ಧ ನಡೆದ ದಂಗೆಗಳಲ್ಲಿ ಕೊಪ್ಪಳ ಪ್ರದೇಶದ ಅನೇಕ ಹೋರಾಟಗಾರರು ದೇಶಕ್ಕಾಗಿ ಹೋರಾಡಿ ವೀರಮರಣದ ಸಾರಾಂಶಕ ಘಟನೆಗಳು ಇಲ್ಲಿ ನಮಗೆ ನೆನಪನ್ನು ತಂದುಕೊಡುತ್ತವೆ. ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕು ಆರ್ಥಿಕ ಶ್ರೀಮಂತಿಕೆಯ ಜೊತೆಗೆ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಹಿರಿಮೆಯನ್ನು ಹೊಂದಿದೆ. ವೈಶಿಷ್ಟ್ಯಪೂರ್ಣವಾದ ಇಲ್ಲಿಯ ಭೌಗೋಳಿಕ ಸನ್ನಿವೇಶ ಚರಿತ್ರೆಯನ್ನು ಭಿನ್ನವಾಗಿರಿಸದೆ ಒಂದೆಡೆ ಹಬ್ಬಿರುವ ಬೆಟ್ಟದ ಸಾಲುಗಳು ಮತ್ತೊಂದೆಡೆ ಬೆಟ್ಟ ಬಯಲುಗಳಿಂದ ಕೂಡಿದ ಪ್ರಾಕೃತಿಕ ಪರಿಸರದಲ್ಲಿ ನದಿ ಹಳ್ಳಕೆರೆ ಮಣ್ಣು-ಶಿಲೆ ಖನಿಜ ಸಸ್ಯಪ್ರಾಣಿಗಳ ವೈವಿಧ್ಯತೆ ಇದೆ. ಇದು ಪ್ರಾಚೀನ ಕಾಲದಿಂದಲೂ ಇಲ್ಲಿನ ಮಾನವ ಬದುಕನ್ನು ಸಾಂಸ್ಕೃತೀಕರಣಗೊಳಿಸುವಲ್ಲಿ ಪ್ರಮುಖ ಪಾತ್ರವಹಿಸಿದೆ. ಐತಿಹಾಸಿಕ ಪ್ರಸಿದ್ಧ ಸ್ಥಳಗಳಾದ ಆನೆಗೊಂದಿ, ಕನಕಗಿರಿ, ಹೇಮಗುಡ್ಡ, ಹಿರೇಜಂತಕಲ್, ವೆಂಕಟಾಪುರ, ಪಂಪಾ ಸರೋವರ ಇನ್ನು ಮುಂತಾದ ಸ್ಥಳಗಳಿವೆ.

ಕೊಪ್ಪಳ ಜಿಲ್ಲೆಯ ತಾಲೂಕು ಕೇಂದ್ರವಾದ ಕುಷ್ಟಗಿ ಪಟ್ಟಣವು ಹಿಂದುಳಿದ ಬರಗಾಲ ಪೀಡಿತ ಪ್ರದೇಶವಾಗಿದೆ. ಆದರೆ ತಾಲೂಕಿನ ಐತಿಹಾಸಿಕ ಸೊಗಡು, ಸ್ಮಾರಕಗಳು, ಶಿಲಾಶಾಸನಗಳು ಪ್ರೇಕ್ಷಣೀಯ ಸ್ಥಳಗಳು ಹೈದ್ರಾಬಾದ್-ಕರ್ನಾಟಕದ ಸ್ವಾತಂತ್ರ್ಯ ಹೋರಾಟದ ಕ್ಷಣಗಳು ಸಮಕಾಲೀನ ಹೋರಾಟದ

ರಾಜಕೀಯ, ಸಾಮಾಜಿಕ, ಶೈಕ್ಷಣಿಕ, ಧಾರ್ಮಿಕ ರಂಗಗಳು ಕರಕುಶಲತೆ ಕೈಗಾರಿಕೆ ಸಂಸ್ಕೃತಿ ನಾಗರಿಕತೆ ಕಲೆ ಸಂಗೀತ ಸಾಹಿತ್ಯ ಕ್ಷೇತ್ರದಲ್ಲಿ ಬಹು ಶ್ರೀಮಂತಿಕೆಯನ್ನು ಕಂಡಿದೆ. ಇಲ್ಲಿತನ್ನದೇ ಆದ ಐತಿಹಾಸಿಕ ಚಾರಿತ್ರಿಕ ನೆಲೆಯನ್ನು ಹೊಂದಿದೆ. ಈ ತಾಲೂಕಿನಲ್ಲಿ ಉರುಸು, ಉತ್ಸವ, ಜಾತ್ರೆಗಳು, ಸಾಂಪ್ರದಾಯಿಕ ಹಬ್ಬ ಆಚರಣೆಗಳು ಸರ್ವಧರ್ಮೀಯರು ಕೂಡಿಕೊಂಡು ಆಚರಿಸುವ ಪದ್ಧತಿ ಪ್ರಾಚೀನ ಕಾಲದಿಂದಲೂ ರೂಢಿಸಿಕೊಂಡು ಬಂದಿದ್ದಾರೆ. ಇಲ್ಲಿನ ಐತಿಹಾಸಿಕ ಪ್ರಮುಖ ಸ್ಥಳಗಳೆಂದರೆ ಕುಷ್ಟಗಿ, ಪುರ, ಚಂದ್ರಗಿರಿ ಇನ್ನು ಮುಂತಾದ ಸ್ಥಳಗಳಾಗಿವೆ.

ಯಲಬುರ್ಗಾ ತಾಲೂಕಿನಲ್ಲಿ ಪೂರ್ವಕಾಲದಿಂದಲೂ ಐತಿಹಾಸಿಕ ಹಾಗೂ ಸಾಂಸ್ಕೃತಿಕವಾಗಿ ನಾಡಿನ ಇತಿಹಾಸ ಪುಟಗಳಲ್ಲಿ ಗರಿ ಮೂಡಿಸುವಲ್ಲಿ ಮಹತ್ವವೆನಿಸಿಕೊಂಡಿದೆ. ಈ ತಾಲೂಕು ಆರ್ಥಿಕವಾಗಿ ಬಡವಾಗಿದ್ದರೂ ಚಾರಿತ್ರಿಕವಾಗಿ, ಕಲಾತ್ಮಕವಾಗಿ ಭವ್ಯ ಹಿರಿಮೆ-ಗರಿಮೆಯನ್ನು ಹೊಂದಿದೆ. ಇದು ಅಪೂರ್ವ ದೇವಾಲಯಗಳನ್ನು ಸಹ ಹೊಂದಿದೆ. ಈ ತಾಲೂಕಿನ ಪ್ರಮುಖ ಐತಿಹಾಸಿಕ ಸ್ಥಳಗಳೆಂದರೆ ಇಟಗಿ, ಕುಕನೂರು, ಕಲ್ಲೂರು, ಮುಧೋಳ ಇನ್ನು ಮುಂತಾದವು.

ಈ ಜಿಲ್ಲೆಯ ಪ್ರಾಚೀನತೆಯ ಬಗ್ಗೆ ಹೇಳುವುದಾದರೆ ಇಲ್ಲಿ ದೊರೆತ ತಲೆಬುರುಡೆ, ಮಣ್ಣಿನ ಪಾತ್ರೆ, ಆಯುಧಗಳು, ಈ ಸ್ಥಳ ಪ್ರಾಚೀನ ಕಾಲದಿಂದ ಮಾನವನ ವಾಸಸ್ಥಳವಾಗಿತ್ತೆಂಬುದಕ್ಕೆ ಸಾಕ್ಷಿ ಹೇಳುತ್ತವೆ. ಇಲ್ಲಿಯ ಸುಪ್ರಸಿದ್ಧ ಗವಿಸಿದ್ಧೇಶ್ವರ ಮಠದ ಮೇಲಿನ ಗುಹೆಗಳಲ್ಲಿ ಶಿಲಾಯುಗದ ಆದಿಮಾನವನ ವರ್ಣರಂಜಿತ ಚಿತ್ರಗಳೂ ದೊರೆತಿವೆ. ಮೋರೆರ ಅಂಗಡಿ, ಮೋರೆರ ಅಗಸಿ, ಮಿಂಚರ ಬಂಡೆ ಬಯಲು ಮೊದಲಾದವು ಈ ಸ್ಥಳದ ಇತಿಹಾಸವನ್ನು ಕ್ರಿಸ್ತಪೂರ್ವದತ್ತ ಕೊಂಡೊಯ್ಯುತ್ತವೆ. ಇಲ್ಲಿ ಅರ್ಜುನನು ಶಿವನಿಂದ ಪಾಶುಪತಾಸ್ತ್ರವನ್ನು ಪಡೆಯಲು ತಪಸ್ಸುಗೈದು ಇಂದಕೀಲ ಪರ್ವತ ಸಾಲುಗಳಲ್ಲಿಯೇ ಇದೆಯೆಂದು ನಂಬಲಾಗಿದೆ. ಕೊಪ್ಪಳ ಮೂಲತಃ ಪ್ರಾಚೀನ ನೆಲೆ ಆದಿ ಮಾನವನ ತಾಣವಾಗಿದ್ದು. ಕೊಪ್ಪಳ ಜಿಲ್ಲೆಗೆ ಸೇರಿದ ಪ್ರಾಚೀನ ನೆಲೆಗಳಿವು: ಅವುಗಳಲ್ಲಿ ಹಿರೇಬೆಣಕಲ್, ಆನೆಗೊಂದಿ, ಮನ್ನಾಪುರ, ಮೊದಲಾದವು ಸೇರಿವೆ. ಆನೆಗೊಂದಿ ಪ್ರದೇಶವು ಹಂಪಿಯ ಪರಿಸರವನ್ನು ಒಳಗೊಂಡಂತೆ ರಾಮಾಯಣ ಕಾಲದಿಂದಲೂ ಪ್ರಸಿದ್ಧಿಯಾಗಿದೆ. ಈ ಪರಿಸರದಲ್ಲಿರುವ ಕಿಷ್ಕಿಂದೆ, ಅಂಜನಾದ್ರಿ, ಶಬರಿಗುಹೆ, ಸೀತಾ ಸೆರಗು, ಸುಗ್ರೀವ ಗುಹೆಗಳು ರಾಮಾಯಣದ ಘಟನೆಗಳನ್ನು ಕಣ್ಮುಂದೆ ತರುತ್ತವೆ. ಪ್ರಾಚೀನ ಶಿಲೆಗಳನ್ನು ಗುರುತಿಸಲು ಈ ಬಗೆಯ ರಾಮಾಯಣ, ಮಹಾಭಾರತದ ಘಟನೆಗಳನ್ನು ಸ್ಥಳಗಳಿಗೆ ಅನ್ವಯಿಸಿರುವುದನ್ನು ಕರ್ನಾಟಕದಾದ್ಯಂತ ಕಾಣಬಹುದು. ಅಂತೆಯೇ ಶಿವಪಾರ್ವತಿಯ ಕ್ಷೇತ್ರವೆಂದು ಹಂಪಿಯ ಹೇಮಕೂಟ, ಆನೆಗೊಂದಿ ಬಳಿಯ ಪಂಪಾಸರೋವರಗಳನ್ನು ಹೆಸರಿಸಲಾಗಿದೆ. ಕ್ರಿ.ಶ. ೭ನೆಯ ಶತಮಾನದಲ್ಲಿ ಹಂಪಿಯು ಪಂಪಾಕ್ಷೇತ್ರ, ಪಂಪಾತೀರ್ಥವೆಂದು ಖ್ಯಾತಿಯನ್ನು ಪಡೆದಿದ್ದು ಶಾಸನಗಳಲ್ಲಿ ಉಲ್ಲೇಖವಿದೆ. ಈ ಮೇಲಿನ ಘಟನೆಗಳನ್ನು ಪುರಾಣ ಕಲ್ಪನೆಗಳನ್ನು ಬಿತ್ತಿದರೆ ಪ್ರಾಕ್ಚಾರಿತ್ರಿಕ ನೈಜತೆಯನ್ನು ಸ್ಪಷ್ಟಪಡಿಸುವ ಆದಿಮಾನವನ ಗುಹೆಗಳು ಗುಹೆಯ

ಬಂಡೆಗಲ್ಲುಗಳ ಮೇಲಿನ ರೇಖಾಚಿತ್ರ, ವರ್ಣಚಿತ್ರಗಳು ಬೃಹತ್ ಶಿಲಾಗೋರಿಗಳು, ಮಡಿಕೆ-ಕುಡಿಕೆ ಮೊದಲಾದ ಕುರುಹುಗಳು ಈ ಪ್ರದೇಶದಲ್ಲಿ ಕಂಡುಬರುತ್ತವೆ.

ಹೀಗೆ ಕ್ರಿ.ಪೂ ೩ನೇ ಶತಮಾನದ ಅಶೋಕ ಚಕ್ರವರ್ತಿಯಿಂದ ಆರಂಭವಾದ ಕೊಪ್ಪಳ ಪ್ರದೇಶದ ಇತಿಹಾಸವು ಶಾತವಾಹನರಿಂದ ಹೈದ್ರಾಬಾದಿನ ನಿಜಾಮನ ಆಳ್ವಿಕೆಯವರೆಗೆ ಒಳಪಟ್ಟಿತ್ತೆಂದು ದಾಖಲೆಗಳಿಂದು ಮಾಹಿತಿ ನೀಡುತ್ತವೆ. ಕೊಪ್ಪಳ ಪ್ರದೇಶವು ಚಾರಿತ್ರಿಕತೆಯಿಂದ ಆಧುನಿಕದ ಇತಿಹಾಸದವರೆಗೂ ಭವ್ಯ ಸಂಸ್ಕೃತಿಯ ಪರಂಪರೆಯನ್ನು ಹೊಂದಿ ಕರ್ನಾಟಕದ ಚರಿತ್ರೆಯಲ್ಲಿ ತನ್ನದೇ ಆದ ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ ಎಂದು ಹೇಳಬಹುದಾಗಿದೆ.

**ಅಧ್ಯಯನದ ವ್ಯಾಪ್ತಿ :**

ಯಾವುದೇ ಸಂಶೋಧನಗೆ ತೊಡಗುವಾಗ ಅದಕ್ಕೆ ತನ್ನದೇ ಆದ ಕೆಲವೊಂದು ವ್ಯಾಪ್ತಿಯ ರೂಪರೇಷಗಳನ್ನು ಹಾಕಿಕೊಳ್ಳಬೇಕಾದುದು ಅವಶ್ಯಕವೆನಿಸುತ್ತದೆ. ಇಲ್ಲವಾದರೆ ವಿಷಯ ವಿಸ್ತಾರದ ಅತಿ ವ್ಯಾಪ್ತಿಯಾಗಿ ಸಂಶೋಧನಾಧ್ಯಯನದ ಮುಖ್ಯ ಉದ್ದೇಶಕ್ಕೆ ಧಕ್ಕೆ ಬಂದು ಸಂಶೋಧನಾ ಕ್ರಿಯೆಯು ದಾರಿತಪ್ಪುವ ಸಾಧ್ಯತೆಯಿರುತ್ತದೆ. ಆದುದರಿಂದ ಪ್ರಸ್ತುತ ಅಧ್ಯಯನದ ಸಂದರ್ಭದಲ್ಲಿ ಕೆಲವೊಂದು ವ್ಯಾಪ್ತಿಗಳನ್ನು ರೂಪಿಸಿಕೊಳ್ಳಬೇಕಾಗುತ್ತದೆ. ಯಾವುದೇ ಅಧ್ಯಯನಕ್ಕೂ ಒಂದು ನಿರ್ದಿಷ್ಟ ಚೌಕಟ್ಟು ಹಾಗೂ ಇತಿಮಿತಿ ಇರುವುದು ಅಗತ್ಯವೆನಿಸುತ್ತದೆ. ನಮ್ಮ ಸಂಸ್ಕೃತಿಯನ್ನು ತಲಸ್ಪರ್ಶಿಯಾಗಿ ಹೊಂದಿದಂತಹ ಸ್ಮಾರಕಗಳ ವಿಸ್ತೃತ ಅಧ್ಯಯನ ಅಪೇಕ್ಷಣೀಯವಾಗಿದೆ. ಅವುಗಳ ವಿವಿಧ ಆಯಾಮಗಳನ್ನು ಸಾಂಸ್ಕೃತಿಕವಾಗಿ ಮೂಡಿ ಬಂದಿರುವ ಸಂಗತಿಗಳಿಗನುಗುಣವಾಗಿ ಅಧ್ಯಯನದ ವ್ಯಾಪ್ತಿಯನ್ನು ರೂಪಿಸಿಕೊಳ್ಳಲಾಗಿದೆ.

ಈ ರೀತಿಯಾಗಿ ಪ್ರಕಟಗೊಂಡಿರುವ ಕೊಪ್ಪಳ ಜಿಲ್ಲೆಯ ಶಾಸನಗಳಿಂದಾಗಲಿ, ಸ್ಮಾರಕಗಳ ಇತರ ದಾಖಲೆಗಳಿಂದ ಈ ಒಂದು ಅಧ್ಯಯನದಿಂದ ಜಿಲ್ಲೆಯ ಇತಿಹಾಸ ಸಂಸ್ಕೃತಿಯನ್ನು ಚಿತ್ರಿಸುವ ಅವಕಾಶ ಉಂಟಾಗುತ್ತದೆ. ಈ ಮೂಲಕ ನಮ್ಮ ನಾಡು ಕಾಲದಿಂದ ಕಾಲಕ್ಕೆ ಆಳಿದ ರಾಜರ ಆಡಳಿತ ಅಂದಿನ ರಾಜಕೀಯ ಸಂಸ್ಕೃತಿ ಅನುಸರಿಸಿದ ಧರ್ಮ ಕಲೆ, ಸಾಹಿತ್ಯ ಜನಜೀವನದ ರೀತಿ ವಾಸ್ತುಶಿಲ್ಪದ ಆಚಾರ-ವಿಚಾರಗಳನ್ನು ತಿಳಿದುಕೊಳ್ಳಬಹುದಾಗಿದೆ. ಕೊಪ್ಪಳ ಜಿಲ್ಲೆಯ ಪ್ರಮುಖವಾಗಿ ಐತಿಹಾಸಿಕ ಸ್ಥಳಗಳನ್ನು ಹೊಂದಿದ್ದು ಆದುದರಿಂದ ನನ್ನ ಸಂಶೋಧನೆಯ ಅಧ್ಯಯನದ ಮಿತಿಯಿಂದ ಕೆಲವು ಪ್ರಮುಖ ಐತಿಹಾಸಿಕ ಸ್ಥಳಗಳನ್ನು ಮಾತ್ರ ಪ್ರಾತಿನಿಧಿಕವಾಗಿ ತೆಗೆದುಕೊಳ್ಳುತ್ತಿದ್ದೇನೆ. ಕೊಪ್ಪಳ, ಇರಕಲ್ಲಗಡ, ಮಾದಿನೂರು, ಹುಲಿಗಿ, ಕುಮ್ಮಟದುರ್ಗ, ಬಹದ್ದೂರ ಬಂಡಿ, ಆನೆಗೊಂದಿ, ಕನಕಗಿರಿ, ಹೇಮಗುಡ್ಡ, ಕುಷ್ಟಗಿ, ಚಂದ್ರಗಿರಿ, ಪುರ, ಇಟಗಿ, ಕುಕನೂರು, ಕಲ್ಲೂರು, ಮುಧೋಳ.

**ಇದುವರೆಗೂ ಕೊಪ್ಪಳ ಜಿಲ್ಲೆಯ ಕುರಿತು ನಡೆದಿರುವ ಅಧ್ಯಯನಗಳು :**

ಕೊಪ್ಪಳ ಜಿಲ್ಲೆಯ ಚರಿತ್ರೆಯನ್ನು ಕಳೆದ ಅನೇಕ ವರ್ಷಗಳಿಂದ ನೋಡುವ ದೃಷ್ಟಿ ಗಮನಾರ್ಹವಾದ ಬದಲಾವಣೆಗಳನ್ನು ಪಡೆಯುತ್ತಾ ಬಂದಿದೆ. ಕನ್ನಡನಾಡಿನ ಕೆಲವು ಪ್ರಮುಖ ರಾಜಮನೆತನಗಳ ಕುರಿತು

ಇತಿಹಾಸ ಕ್ಷೇತ್ರದಲ್ಲಿ ವಿವಿಧ ವಿದ್ವಾಂಸರು ಒಲವನ್ನು ತೋರಿ ವೈವಿಧ್ಯಮಯ ಅಧ್ಯಯನದಲ್ಲಿ ತೊಡಗಿದ್ದಾರೆ. ಇಲ್ಲಿನ ದಾಖಲೆಗಳ ಆಧಾರಗಳನ್ನು ಇಟ್ಟುಕೊಂಡು ವಿಭಿನ್ನ ದೃಷ್ಟಿಕೋನದಿಂದಲೂ ಇಂದಿಗೂ ಅಧ್ಯಯನ ನಡೆಸುತ್ತಾ ಬಂದಿದ್ದಾರೆ. ರಾಜಕೀಯ ಸಂಗತಿಗಳನ್ನು ಹೊರತುಪಡಿಸಿ ಸಾಂಸ್ಕೃತಿಕ ಮತ್ತು ಸಾಮಾಜಿಕ ಅಂಶಗಳನ್ನು ಗುರುತಿಸುವ ಪ್ರಯತ್ನಗಳು ನಡೆದಿವೆ. ಹೈದ್ರಾಬಾದ್-ಕರ್ನಾಟಕ ಭಾಗದ ಕೊಪ್ಪಳ ಜಿಲ್ಲೆಯ ಶಾಸನಾಧ್ಯಯನದ ಸಾಲಿನಲ್ಲಿ ಪ್ರಮುಖರಾದವರೆಂದರೆ ಡಾ. ಪಿ.ಬಿ.ದೇಸಾಯಿ ಅವರ 'ಶಾಸನ ಪರಿಚಯ' ಮತ್ತು "Jainism in South India and Some Jaina Epigraphs" ಎಂಬ ಪುಸ್ತಕದಲ್ಲಿ ಕೊಪ್ಪಳ ಜಿಲ್ಲೆಯ ಶಾಸನಗಳನ್ನು ಅದರಲ್ಲಿಯೂ ಜೈನ ಶಾಸನಗಳನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. ಈ ಎಲ್ಲಾ ಶಾಸನಗಳನ್ನೊಳಗೊಂಡಂತೆ ಹೆಚ್ಚಿನ ಸಮಗ್ರ ಹೊಸ ಶಾಸನಗಳೊಂದಿಗೆ ಹಂಪಿ ಕನ್ನಡ ವಿಶ್ವವಿದ್ಯಾಲಯ ಶಾಸನಶಾಸ್ತ್ರದ ವಿಭಾಗದಿಂದ ಕೊಪ್ಪಳ ಜಿಲ್ಲೆಯ ಶಾಸನಗಳ ಸಂಪುಟ -ವನ್ನು ಹೊರತಂದಿದೆ. ಈ ರೀತಿಯಾಗಿ ಪ್ರಕಟಗೊಂಡಿರುವ ಕೊಪ್ಪಳ ಜಿಲ್ಲೆಯ ಶಾಸನಗಳ ಈ ಒಂದು ಅಧ್ಯಯನದಿಂದ ಜಿಲ್ಲೆಯ ಇತಿಹಾಸ, ಸಂಸ್ಕೃತಿಯನ್ನು ತಿಳಿದುಕೊಳ್ಳುವ ಅವಕಾಶ ಉಂಟಾಗುತ್ತದೆ.

ಕೊಪ್ಪಳ ಜಿಲ್ಲೆಯ ಬಗ್ಗೆ ಅಧ್ಯಯನ ಕೈಗೊಂಡು ಪ್ರಮುಖವಾಗಿ ಪ್ರಕಟಗೊಂಡ ಗ್ರಂಥಗಳೆಂದರೆ, 'ಗವಿದೀಪ್ತಿ'ಯ 'ಕೊಪ್ಪಳನಾಡಿನ ಇತಿಹಾಸ ಲೇಖನಗಳು' ಬಿ.ಸಿ.ಪಾಟೀಲರ 'ಕೊಪ್ಪಳ ಸಾಂಸ್ಕೃತಿಕ ಪರಂಪರೆ' ಮತ್ತು 'ಇದು ದೇವಾಲಯಗಳ ಚಕ್ರವರ್ತಿ ಮಹಾದೇವ ದೇವಾಲಯ,' 'ಕೊಪ್ಪಳದ ಹೆಚ್ಚಿನ ಶಾಸನಗಳು ಬಹುಮುಖ್ಯವಾಗಿವೆ. ಪ್ರೊ.ಅಲ್ಲಮಪ್ರಭು ಬೆಟ್ಟದೂರು ಸಂಪಾದಕತ್ವದಲ್ಲಿ ಹೊರಬಂದ ಅ.ಭಾ. ೬೨ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಸವಿಸಂಚಿಕೆ, 'ತಿರುಳ್ಗನ್ನಡ' ಒಂದು ಮಹತ್ವದ ಆಧಾರ ಗ್ರಂಥವಾಗಿದೆ. ಡಾ.ಹಂಪಾ ನಾಗಾರಾಜಯ್ಯ ಅವರ 'ಕೊಪ್ಪಳ ಶಾಸನಗಳು', ಡಾ.ಚನ್ನಬಸವಯ್ಯ ಹಿರೇಮಠರವರ 'ಕುರುಗೋಡು ಸಿಂದರು ಒಂದು ಅಧ್ಯಯನ' ಹಂಪಿ ಕನ್ನಡ ವಿಶ್ವವಿದ್ಯಾಲಯದ ಡಾ.ಕೆ.ಎಂ.ಸುರೇಶ್ ಮತ್ತು ಇತರರು ಸಂಪಾದಿಸಿದ 'ಕರ್ನಾಟಕ ದೇವಾಲಯ ಕೋಶ-ಕೊಪ್ಪಳ ಜಿಲ್ಲೆ'. ಇವು ಐತಿಹಾಸಿಕವಾದ ಮಾಹಿತಿ ತಿಳಿಸುವ ಪ್ರಮುಖ ಆಧಾರಗಳಾಗಿವೆ.

ಗವಿಸಿದ್ದಪ್ಪ ಎಚ್.ಪಾಟೀಲರ 'ಕುಕನೂರ ಒಂದು ಸಾಂಸ್ಕೃತಿಕ ಅಧ್ಯಯನ' (ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ) ಮತ್ತು ಸಿದ್ದಲಿಂಗಪ್ಪ ಕೊಟ್ನೆಕಲ್‌ರವರ 'ಕೊಪ್ಪಳ ಜಿಲ್ಲೆಯ ಶಾಸನಗಳು: ಸಮಗ್ರ ಅಧ್ಯಯನ', (ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ) ಹಾಗೂ ಡಿ.ಎಸ್.ಅಶ್ವಥ್‌ರವರ ಕೊಪ್ಪಳ: ಒಂದು ಸಾಂಸ್ಕೃತಿಕ ಅಧ್ಯಯನ, (ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ)ಗಳು ಸಂಶೋಧನಾತ್ಮಕ ಅಪ್ರಕಟಿತ ಆಧಾರಗಳಾಗಿವೆ.

ಕನ್ನಡ ನಾಡು-ನುಡಿ ಸಂಸ್ಕೃತಿಯ ಬಗ್ಗೆ ಅಧಿಕೃತವಾದ ಸಂಶೋಧನೆ ನಡೆಸುತ್ತಿರುವ ಕನ್ನಡ ವಿಶ್ವವಿದ್ಯಾಲಯವು ಈ ಭಾಗದ ಅನೇಕ ಸಾಂಸ್ಕೃತಿಕ ಅಂಶಗಳ ಬಗ್ಗೆ ಗುರುತರವಾದ ಅಧ್ಯಯನಗಳನ್ನು ನಡೆಸಿದೆ. ಜಾನಪದ ಅಧ್ಯಯನ ವಿಭಾಗದಲ್ಲಿ ಸಂಶೋಧನೆ ವಿದ್ಯಾರ್ಥಿಯಾಗಿರುವ ಪ್ರಕಾಶ್ ಬಳ್ಳಾರಿಯವರು "ಕೊಪ್ಪಳ ಜಿಲ್ಲೆಯ ಮೊಹರಂ ಪದಗಳು" ಎಂಬ ವಿಷಯದಲ್ಲಿ ಸಂಶೋಧನೆ ಕೈಗೊಂಡಿದ್ದಾರೆ. ಉಮೇಶ್

ಕಾತರಕಿಯವರು ಮಹಿಳಾ ಅಧ್ಯಯನ ವಿಭಾಗದಿಂದ "ಬಿಸರಳ್ಳಿ ಗ್ರಾಮದ ದೇವದಾಸಿ ಪದ್ಧತಿ: ಒಂದು ಅಧ್ಯಯನ" ಎಂಬ ವಿಷಯದಲ್ಲಿ ಸಂಶೋಧನೆ ಕೈಗೊಂಡಿದ್ದಾರೆ. ಮುಕುಂದರಾವ್ ದೇಸಾಯಿಯವರು ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗದಲ್ಲಿ "ಕೊಪ್ಪಳ ತಾಲೂಕಿನ ಜೈನಧರ್ಮ ಮತ್ತು ಸಂಸ್ಕೃತಿ" ಎಂಬ ವಿಷಯದಲ್ಲಿ ಸಂಶೋಧನೆ ಕೈಗೊಂಡಿದ್ದಾರೆ. ಈ ಮೇಲಿನ ಸಂಶೋಧನಾತ್ಮಾಕ ಆಧಾರಗಳನ್ನಿಟ್ಟುಕೊಂಡು ಕೊಪ್ಪಳ ಜಿಲ್ಲೆಯ ಐತಿಹಾಸಿಕ ಸ್ಥಳಗಳ ಸಾಂಸ್ಕೃತಿಕ ಅಧ್ಯಯನ ಎಂಬ ವಿಷಯದಡಿಯಲ್ಲಿ ಸಂಶೋಧನೆ ಕೈಗೊಳ್ಳಲಾಗಿದೆ.

# ಮೂರು

## ಐತಿಹಾಸಿಕ ಸ್ಥಳಗಳ ಚಾರಿತ್ರಿಕ ನೋಟ

೧. ಕೊಪ್ಪಳ

೨. ಇರಕಲ್ಲಗಡ

೩. ಹುಲಿಗಿ

೪. ಮಾದಿನೂರು

೫. ಕುಮ್ಮಟದುರ್ಗ

೬. ಬಹದ್ದೂರ ಬಂಡಿ

೭. ಆನೆಗೊಂದಿ

೮. ಕನಕಗಿರಿ

೯. ಹೇಮಗುಡ್ಡ

೧೦. ಕುಷ್ಟಗಿ

೧೧. ಪುರ

೧೨. ಚಂದ್ರಗಿರಿ

೧೩. ಇಟಗಿ

೧೪. ಕುಕನೂರು

೧೫. ಕಲ್ಲೂರು

೧೬. ಮುಧೋಳ

# ಮೂರು

## ಐತಿಹಾಸಿಕ ಸ್ಥಳಗಳ ಚಾರಿತ್ರಿಕ ನೋಟ

### ೧. ಕೊಪ್ಪಳ

ಕೊಪ್ಪಳ ಪ್ರದೇಶದ ಚರಿತ್ರೆಯನ್ನು ಕ್ರಿಸ್ತ ಪೂರ್ವ ಕಾಲಕ್ಕೆ ಒಯ್ಯಬಹುದಾಗಿದೆ. ಭರತ ಖಂಡವನ್ನಾಳಿದ ಚಕ್ರವರ್ತಿ ಅಶೋಕನಿಗೆ ಸಂಬಂಧಿಸಿದ ಎರಡು ಶಾಸನಗಳು ಕೊಪ್ಪಳದಲ್ಲಿ ದೊರಕಿವೆ. ಈ ಕಾರಣದಿಂದಾಗಿ ಕೊಪ್ಪಳವು ಚಾರಿತ್ರಿಕ ಹಿನ್ನೆಲೆ ಪಡೆದಿದೆ. ಮೌರ್ಯರು, ಶಾತವಾಹನರು, ಕದಂಬರು, ಚಾಲುಕ್ಯರು, ಗಂಗರು, ರಾಷ್ಟ್ರಕೂಟರು, ಹೊಯ್ಸಳರು, ವಿಜಯನಗರ ಅರಸರು ಬಹಮನಿ ಸುಲ್ತಾನರು, ನಿಜಾಮರು ಮುಂತಾದ ಅರಸು ಮನೆತನದ ಚಕ್ರಾಧಿಪತ್ಯಗಳೊಂದಿಗೆ ಒಂದಲ್ಲ ಒಂದು ಬಗೆಯ ಸಂಬಂಧ, ಸಂಪರ್ಕ ಪಡೆದಿದ್ದು ಚಾರಿತ್ರಿಕ ದಾಖಲೆಯಿಂದ ತಿಳಿದುಬರುತ್ತದೆ. ಅನೇಕ ಅರಸು ಮನೆತನಗಳಿಗೆ, ಚಕ್ರಾಧಿಪತಿಗಳಿಗೆ ಸೇರಿದ ಶಾಸನಗಳಲ್ಲಿ ಸಾಹಿತ್ಯ ಕೃತಿಗಳಲ್ಲಿ ಮತ್ತು ತಾಮ್ರಪತ್ರಗಳಲ್ಲಿ ಕೊಪ್ಪಳ ಪ್ರದೇಶದ ಬಗ್ಗೆ ಉಲ್ಲೇಖಿಸಿದೆ.

ಕೊಪಣತೀರ್ಥ, ಆದಿತೀರ್ಥ, ಮಹಾತೀರ್ಥ, ಕೊಪಣಾಚಲ ಮುಂತಾದ ಹೆಸರುಗಳಿಂದ ಕರೆದಿರುವುದು ಶಿಲಾಶಾಸನಗಳಿಂದ ಹಾಗೂ ಸಾಹಿತ್ಯಿಕ ಕೃತಿಗಳಿಂದ ಮಾಹಿತಿಯು ಸ್ಪಷ್ಟವಾಗುತ್ತದೆ. ಪ್ರಾಚೀನ ಕಾಲದಿಂದಲೂ ಕೊಪ್ಪಳ ಜೈನರ ಪ್ರಸಿದ್ಧ ಕ್ಷೇತ್ರವಾಗಿತ್ತು. ಹಾಗೂ ಬೌದ್ಧ ಧರ್ಮದ ವಿಹಾರವಾಗಿತ್ತು. ಕನ್ನಡದ ಪ್ರಮುಖ ಕವಿ ರನ್ನನು ತನ್ನ ಕೃತಿಯಲ್ಲಿ ಆಶ್ರಯದಾತೆಯಾಗಿದ್ದ ಅತ್ತಿಮಬ್ಬೆಯನ್ನು "ನೆಗಳ್ದ ಕೊಪಣಾಚಲದಂತೆ ಪವಿತ್ರ" ಎಂದು ವರ್ಣಿಸಿದ್ದಾನೆ. ಅದೊಂದು ಜೈನರ ಯಾತ್ರಾ ಸ್ಥಳ ಆಗಿತ್ತು. ಕುಮಾರಸೇನನೆಂಬ ಮುನಿ ಮುಳುಗುಂದದಲ್ಲಿ ತಪಸ್ಸನ್ನು ಆಚರಿಸಲು ತೃಪ್ತಿ ಕಾಣದೆ ಕೊಪಣಾಚಲಕ್ಕೆ ಬಂದು ಮುಕ್ತಿ ಪಡೆದನೆಂದು ಚಾವುಂಡರಾಯ ಪುರಾಣದಲ್ಲಿ ಉಲ್ಲೇಖವಿದೆ. ಇಲ್ಲಿ ೭೭೨ ಜಿನಾಲಯಗಳಿದ್ದವೆಂದು ಶಾಸನಗಳಲ್ಲಿ ವರ್ಣಿಸಲಾಗಿದೆ. ಇದೊಂದು ಜೈನ ಕೇಂದ್ರವಾಗಿತ್ತು

ಎಂಬುದು ೧೩ನೇ ಶತಮಾನಕ್ಕೆ ಸೇರಿದ ಹರಿಹರ, ರಾಘವಾಂಕ, ಅವರುಗಳ ಕೃತಿಗಳಲ್ಲಿ ಉಲ್ಲೇಖಿಗಳಿವೆ. ಕನ್ನಡದಲ್ಲಿ ಪ್ರಥಮ ಶಾಸ್ತ್ರ ಗ್ರಂಥವೆಂಬ ಕೀರ್ತಿಗೆ ಪಾತ್ರವಾಗಿರುವ 'ಕವಿರಾಜ ಮಾರ್ಗ'ದಲ್ಲಿ ಇದನ್ನು 'ಮಹಾಕೊಪಣನಗರ' ಎಂದು ಕರೆಯಲಾಗಿದೆ.[೧]

ಕೊಪ್ಪಳವು ನಂತರದಲ್ಲಿ ಅನೇಕ ಅರಸರ ಕೈಗೆ ಹಸ್ತಾಂತರಗೊಳ್ಳುತ್ತ ಬಂದಿತ್ತು. ವಿಜಯನಗರದ ಅರಸರು ಹರಿಹರ ಭಕ್ತಸಮೂಹದೊಂದಿಗೆ ಸಿಂಹ ನಂದ್ಯಾಚಾರ್ಯ ನಿಶಧಿಗೆ ನಿಲ್ಲಿಸಿದಂತೆ ಇಲ್ಲಿಯ ಇನ್ನೊಂದು ಶಾಸನದಿಂದ ತಿಳಿಯುತ್ತದೆ. ಬಿಜಾಪುರದ ಆದಿಲ್‌ಷಾಹಿಯ ಕಾಲದಲ್ಲಿ ಈ ಸ್ಥಳವನ್ನು 'ಮುಜಫರನಗರ' ಎಂದು ಕರೆಯಲಾಗಿದೆ. ೨ನೆಯ ಇಬ್ರಾಹಿಂ ಆದಿಲ್‌ಷಾಹಿಯ ಆಡಳಿತದಲ್ಲಿ ಯಾಕೂಬನೆಂಬುವನು ಈ ಭಾಗದ ಅಧಿಕಾರಿಯಾಗಿದ್ದಾಗ ಘಾಜಿಖಾನ್ ಎಂಬುವನು ಇಲ್ಲಿ ಒಂದು ಮಸೀದಿ ನಿರ್ಮಿಸಿದನು.[೨] ಕೊಪ್ಪಳ ನಗರ ತರುವಾಯ ಹೈದರಾಲಿಯ ಕೈ ಸೇರಿತು. ಇವರ ಉತ್ತರಾಧಿಕಾರಿಯನ್ನಾಗಿ ಮಹಮ್ಮದ್ ಉಸ್ಮಾನ್ ಕೋವಾರ್ ಎಂಬುವನನ್ನು ನೇಮಿಸಲಾಯಿತು. ಇವನು ಕೊಪ್ಪಳ ಕೋಟೆಯ ಎರಡನೆಯ ಬಾಗಿಲನ್ನು ಮತ್ತು ಬಹದ್ದೂರ್ ಬಂಡೆಯ ಕೋಟೆಯನ್ನು ಕಟ್ಟಿಸಿದನು. ಮರಾಠರೊಂದಿಗೆ ಹೋರಾಡಿ ಈ ಸ್ಥಳವನ್ನು ವಶಪಡಿಸಿಕೊಂಡ ಸಂಕೇತವಾಗಿ ಟಿಪ್ಪು ಸುಲ್ತಾನ ಈ ಸ್ಥಳವನ್ನು 'ಸುಲ್ತಾನಗಡ' ಎಂದು ಕರೆದನು. ಕಿತ್ತೂರಿನ ಮಲ್ಲಸರ್ಜ ದೊರೆಯನ್ನು ಇಲ್ಲಿಯೇ ಬಂಧಿಸಿ ಇಟ್ಟಿದ್ದನು. ೧೮ನೆಯ ಶತಮಾನದ ಕೊನೆಯ ಭಾಗದಲ್ಲಿ ಕೊಪ್ಪಳ ಪ್ರದೇಶವೂ ಬ್ರಿಟೀಷರ ವಶವಾಯಿತು. ಕ್ರಿ.ಶ. ೧೮೫೦ ರಿಂದ ೧೮೫೭ರ ಮಧ್ಯದಲ್ಲಿ ಇಲ್ಲಿಯ ವೀರಪ್ಪನೆಂಬ ಜಮೀನ್ದಾರನು ಈಸ್ಟ್ ಇಂಡಿಯಾ ಕಂಪನಿಯ ವಿರುದ್ಧ ಬಂಡೆದ್ದನು. ಬ್ರಿಟೀಷ್ ವಿರೋಧಿ ಪ್ರವೃತ್ತಿ ಮುಂಡರಗಿ ಭೀಮರಾಯನಲ್ಲಿ ಮುಂದುವರೆಯಿತು. ಹಮ್ಮಿಗಿ ಕೆಂಚನಗೌಡ ಈತನಿಗೆ ಬೆಂಬಲವಾಗಿ ನಿಂತನು. ಕ್ರಿ.ಶ. ೧೮೫೮ರಲ್ಲಿ ಬ್ರಿಟೀಷರು ಈ ಬಂಡಾಯವನ್ನು ದಮನ ಮಾಡಿದರು. ೧೮೬೧ರಲ್ಲಿ ಈ ಭಾಗವನ್ನು ನವಾಬ ಸಾಲಾರಜಂಗ ಅವ್ವಲ್ ಅವರಿಗೆ ಜಹಗೀರಾಗಿ ಕೊಡಲ್ಪಟ್ಟಿತು. ಭಾರತಕ್ಕೆ ಸ್ವಾತಂತ್ರ್ಯ ದೊರೆಯುವವರೆಗೂ ಈ ಪ್ರದೇಶ ಸಾಲಾರಜಂಗನ ಅಧಿಪತ್ಯದಲ್ಲಿಯೇ ಇದ್ದಿತು. ಹೀಗೆ ಪ್ರಾಚೀನ ಕಾಲದಿಂದ ಬೇರೆ ಬೇರೆ ಧರ್ಮಗಳ ನೆಲೆವೀಡಾಗಿ ರಾಜಕೀಯ, ಸಾಂಸ್ಕೃತಿಕ, ಚಟುವಟಿಕೆಗಳ ಕೇಂದ್ರವಾಗಿ ಈ ಸ್ಥಳ ಕನ್ನಡನಾಡಿನ ಇತಿಹಾಸದಲ್ಲಿ ಉನ್ನತ ಸ್ಥಾನ ಪಡೆದುಕೊಂಡಿದೆ.

**೨. ಇರಕಲ್ಲಗಡ :**

ಇರಕಲ್ಲಗಡ ಕೊಪ್ಪಳದಿಂದ ಕೇವಲ ೧೫ ಕಿ.ಮೀ. ಅಂತರದಲ್ಲಿರುವ ತಾಲ್ಲೂಕಿನ ಒಂದು ಗ್ರಾಮವಾಗಿದೆ. ಪಕ್ಕದಲ್ಲೆ ಬಿಳಿ ಕಪ್ಪು ಚುಕ್ಕೆಗಳಿಂದ ನಿರ್ಮಿತವಾದ ವಜ್ರಕಲ್ಲಿನ ಗುಡ್ಡ ೨೨ ಎಕರೆ ಭೂಮಿಯನ್ನು ಆವರಿಸಿಕೊಂಡಿದೆ. ಈ ಗುಡ್ಡದ ಮೇಲೆ ಕಟ್ಟಲ್ಪಟ್ಟ ಬೃಹದಾಕಾರವಾದ ಕೋಟೆಯೇ ಗತಕಾಲದ ಘಟನೆಗಳಿಗೆ ಸಾಕ್ಷಿಯಾಗಿ ನಿಂತಿದೆ. ೧೪ನೆಯ ಶತಮಾನದ ಮಧ್ಯದಲ್ಲಿ ನರಸನಾಯಕ ವಿಜಯನಗರ ಸಾಮ್ರಾಜ್ಯದ ತುಳವಂಶದ ದೊರೆಯಾಗಿದ್ದ. ತನ್ನ ಆಡಳಿತದಲ್ಲಿ ಸಾಮ್ರಾಜ್ಯವನ್ನು

ವಿಸ್ತರಿಸುವ ಉದ್ದೇಶದಿಂದ ೫೦ ಅಡಿ ಎತ್ತರವಿರುವ ಕೋಟೆಯ ಗೋಡೆಯನ್ನು ೫ ಎಕರೆ ವಿಸ್ತಾರವಾದ ಪ್ರದೇಶದಲ್ಲಿ ಆಯತಾಕಾರದ ಕಿಂಡಿಗಳನ್ನು ಬಿಟ್ಟು ಕಟ್ಟಿಸಿದನೆಂದು ದಾಖಲೆಗಳು ತಿಳಿಸುತ್ತವೆ.

ಇದೇ ಅವಧಿಯಲ್ಲಿ ಕೋಟೆಯ ಸುತ್ತಲೂ ೮೦ ಎಕರೆ ಪ್ರದೇಶ ಕೆರೆಯಾಗಿ ನಿರ್ಮಾಣವಾಯಿತು. ಅಂದು ನೀರಾವರಿಗಾಗಿ ನಿರ್ಮಿಸಲಾಗಿತ್ತೆನ್ನಲಾದ ಕೆರೆಯಲ್ಲಿ ಇಂದು ನೀರಿಲ್ಲದೆ ಕರಿ ಜಾಲಿ ಮರಗಳು ಬೆಳೆದು ನಿಂತಿವೆ.

ಆಡಳಿತದಲ್ಲಿ ಉತ್ತಮ ಪ್ರಶಂಸೆಗೆ ಪಾತ್ರನಾಗಿದ್ದ ನರಸ ನಾಯಕನಿಗೆ ಕ್ರಮೇಣ ಶತೃಗಳ ಹಾವಳಿ ಹೆಚ್ಚಾಯಿತು. ಶತೃಗಳಿಂದ ಪಾರಾಗಲು ಸುರುಪುರದ ನಾಯಕರ ಸಹಾಯ ಬೇಡುವ ಪ್ರಸಂಗ ಬಂದಾಗ ಮೊದಲು ಹೋಗಿ ಸಹಾಯ ಬೇಡಿದ್ದು ಮಂಡಗೈ ತಿಮ್ಮಪ್ಪ ನಾಯಕನಿಗೆ ಈತನು ಆಪತ್ಕಾಲದಲ್ಲಿ ನೆರವಾಗಿ ವಿಜಯನಗರದ ಅತ್ಯುನ್ನತ ಸ್ಥಿತಿಗೂ ಕಾರಣನಾದ ಇದರಿಂದ ನರಸನಾಯಕನು ತಾನು ಕಟ್ಟಿಸಿದ ಇರಕಲ್ಲಗಡ ಕೋಟೆಯನ್ನೇ ಕೊಡುಗೆಯಾಗಿ ನೀಡಿದನೆಂದು ಸ್ಪಷ್ಟ ಮಾಹಿತಿಯು ಲಭ್ಯವಾಗುತ್ತದೆ. ಕೊಡುಗೆಯಾಗಿ ಕೋಟೆಯನ್ನು ಇನ್ನೂ ಸಮೃದ್ಧಿಯಲ್ಲಿ ಬೆಳೆಸಬೇಕೆಂಬ ಯೋಚನೆಯಲ್ಲಿದ್ದ. ಆದರೆ ಅಧಿಕಾರಕ್ಕಾಗಿ ನಾಯಕ, ದೇಸಾಯಿ ಜನಾಂಗದಲ್ಲಿಯೇ ಒಳಜಗಳ ಪ್ರಾರಂಭವಾಯಿತು. ಆದರೂ ಉದ್ದೇಶಪೂರ್ವಕವಾಗಿ ದೇಸಾಯಿ ಮನೆತನ ನಾಯಕ ಜನಾಂಗದೊಡನೆ ವೈವಾಹಿಕ ಸಂಬಂಧ ಬೆಳೆಸಿ ಕೋಟೆಯನ್ನು ತನ್ನ ವಶಮಾಡಿಕೊಂಡು ಆಡಳಿತದಲ್ಲಿ ಮುಂದುವರೆಯುವಷ್ಟರಲ್ಲಿ ಬಿಜಾಪುರ ನಿಜಾಮಶಾಹಿಗಳ ಸೈನ್ಯದ ಅಧಿಕಾರಿ ಅಲಮ್‌ಗೀರ ಅಹ್ಮದನು ಹೋರಾಟ ಮಾಡುತ್ತ ಬಂದು ಮೋಸದಿಂದ ಕೋಟೆಯನ್ನು ವಶಪಡಿಸಿಕೊಂಡನೆಂದು ಪ್ರತೀತಿಯಿದೆ. ಇದಕ್ಕೆ ಸಾಕ್ಷಿಯಾಗಿ ಆತನ ಹೆಸರಿನಲ್ಲಿ ಇದೇ ಗ್ರಾಮದ ಪಕ್ಕದಲ್ಲಿ ಯಲಮಗೇರಿ ಎಂಬ ಗ್ರಾಮವಿದೆ.

ಮುನ್ನೂರು ವರ್ಷಗಳ ಕಾಲ ನರಸನಾಯಕ, ತಿಮ್ಮಪ್ಪನಾಯಕ, ದೇಸಾಯಿ ಮತ್ತು ಅಲಮ್‌ಗೀರ ಅಹ್ಮದರು ಗಜೇಂದ್ರಗಡದಿಂದ ಆಡಳಿತವನ್ನು ನಡೆಸಿಕೊಂಡು ಬಂದರು. ಹಾಗೆಯೇ ಬಂದಂತೆ ದಕ್ಷಿಣಾಭಿಮುಖವಾಗಿ ದಂಡೆತ್ತಿ ಬಂದ ಮರಾಠ ಛತ್ರಪತಿ ಶಿವಾಜಿಯ ಸೈನಿಕರು (೧೭ನೆಯ ಶತಮಾನದ) ಅಲಮ್‌ಗೀರ ಅಹ್ಮದನೊಂದಿಗೆ ಹೋರಾಟ ನಡೆಸಿ ಕೋಟೆ ಹಾಗೂ ಗ್ರಾಮವನ್ನು ತಮ್ಮ ವಶಕ್ಕೆ ತೆಗೆದುಕೊಂಡರು. ಮೊದಲು ಬಂದಿದ್ದ ಶಿವಾಜಿಯು ಗ್ರಾಮಕ್ಕೆ ಆಡಳಿತ ಶಿವನಗಡ, ಗಜೇಂದ್ರಗಡ ಎಂಬಂತೆ ಇರಕಲ್ಲಗಡವೆಂದು ನಾಮಕರಣ ಮಾಡಲಾಯಿತು. ಶಿವಾಜಿ ಆಡಳಿತದ ನಂತರ ಕೋಟೆ ನಿರ್ಲಕ್ಷ್ಯಕ್ಕೆ ಈಡಾಯಿತೆಂದು ಮಾಹಿತಿಯು ಸ್ಪಷ್ಟವಾಗಿ ದೊರೆಯುತ್ತದೆ.[೩]

ಇತಿಹಾಸ ಪುಟಗಳನ್ನು ತಿರುವುತ್ತಾ ಬಂದರೆ ಗತಕಾಲದ ವಿದ್ಯಮಾನಗಳು ದೊರಕುತ್ತವೆ. ಮಹಾಸಾಮ್ರಾಜ್ಯದ ಉನ್ನತಿಗಾಗಿ ಹೋರಾಡಿದ ವೀರರ ಸಾಹಸಗಳ ಕಾರ್ಯವು ಇಲ್ಲಿ ದೊರೆಯುತ್ತವೆ. ಇಂತಹ ಐತಿಹಾಸಿಕ ತಿರುಳನ್ನು ಪ್ರಚಾರ ಪಡಿಸುವಲ್ಲಿ ವೀರಗಲ್ಲು ಮಹಾಸತಿಗಲ್ಲುಗಳು ಸಾಕ್ಷಿಯಾಗಿವೆ.

## ೩. ಹುಲಿಗಿ :

ಹುಲಿಗಿಯು ಕೊಪ್ಪಳ ತಾಲ್ಲೂಕಿನಲ್ಲಿರುವ ಒಂದು ಪ್ರಸಿದ್ಧವಾದ ಕ್ಷೇತ್ರವಾಗಿದೆ. ತುಂಗಭದ್ರಾ ನದಿಯ ದಂಡೆಯಲ್ಲಿರುವ ಈ ಕ್ಷೇತ್ರಕ್ಕೆ 'ವ್ಯಾಘ್ರಪುರಿ' ಎಂಬ ಹೆಸರಿನಿಂದ ಕರೆಯುವುದು ರೂಢಿಯಲ್ಲಿತ್ತು. ಸದ್ಯ ಹುಲಿಗಿಯು ಪ್ರಸಿದ್ಧ ಕ್ಷೇತ್ರವಾಗಿರುವಂತೆ ಒಂದು ಗ್ರಾಮವೂ ಆಗಿದೆ. ಹುಲಿಗಿ ಕ್ಷೇತ್ರದಲ್ಲಿ ತುಂಗಭದ್ರಾ ನದಿಯು ಉತ್ತರಾಭಿಮುಖವಾಗಿ ಹರಿಯುತ್ತದೆ. ಇದೆ ನದಿ ದಂಡೆಯಲ್ಲಿ ಹುಲಿಗಿ ದೇವಸ್ಥಾನಕ್ಕೆ ತಾಗಿಕೊಂಡಂತೆ ಸೋಮೇಶ್ವರ ದೇವಸ್ಥಾನ ಹೊಂದಿದ್ದು ಅದು ಆಕರ್ಷಕವಾಗಿದೆ. ಹುಲಿಗಿ ಕ್ಷೇತ್ರವು ಒಟ್ಟಾರೆಯಾಗಿ ಸಮತಟ್ಟಾದ ಪ್ರದೇಶವಾಗಿದ್ದು, ತುಂಗಭದ್ರಾ ನದಿಯ ದಂಡೆಯಲ್ಲಿದೆ. ಕ್ರಿ.ಶ. ೧೨ನೆಯ ಶತಮಾನದಲ್ಲಿಯೇ ಹುಲಿಗಿ ಕ್ಷೇತ್ರದಲ್ಲಿ ಬೇಸಾಯ ಚೆನ್ನಾಗಿ ನಡೆಯುತ್ತಿತ್ತೆಂಬುದಕ್ಕೆ ಹುಲಿಗಿಯಲ್ಲಿರುವ ಸೋಮೇಶ್ವರ ದೇವಸ್ಥಾನದಲ್ಲಿರುವ ಶಾಸನವೇ ಸಾಕ್ಷಿಯಾಗಿದೆ.[೪] ಆ ಶಾಸನದ ಪ್ರಕಾರ ಚೌಡಿ ಭಟ್ಟನೆಂಬುವನು ತುಂಗಭದ್ರೆಯಿಂದ ಕೃಷಿ ಭೂಮಿಗೆ ಬೇಕಾದಷ್ಟು ನೀರು ಒದಗಿಸುವ ಕಾರ್ಯ ಮಾಡಿದ್ದಾನೆ. ಹುಲಿಗೆಮ್ಮನ ಕು.ತು ಅನೇಕ ಐತಿಹ್ಯಗಳು ಪ್ರಚಲಿತದಲ್ಲಿದ್ದು ಕೆಲವನ್ನು ಇಲ್ಲಿ ವಿವರಿಸಲಾಗಿದೆ. ಹುಲಿಗೆಮ್ಮನ ಭಕ್ತನನ್ನು ಒಮ್ಮೆ ಟಿಪ್ಪು ಸುಲ್ತಾನ್ ಅವಮಾನ ಮಾಡಿದನಂತೆ ಇದರಿಂದಾಗಿ ಟಿಪ್ಪುವಿನ ಶಕ್ತಿ ಇಳಿಮುಖವಾಯಿತಂತೆ. ಇದು ಹುಲಿಗೆಮ್ಮನ ಕೋಪದ ಪರಿಣಾಮ ಎಂದು ತಿಳಿದ ಆತ ದೇವತೆಗೆ ಚಿನ್ನಾಭರಣಗಳನ್ನು ಹರಕೆಯ ರೂಪದಲ್ಲಿ ಒಪ್ಪಿಸಿದನು. ದೇವತೆಯು ಸುಪ್ರೀತಳಾಗಿ ಟಿಪ್ಪುವಿಗೆ ಆತನ ಶಕ್ತಿ ಧೈರ್ಯಗಳನ್ನು ಮರಳಿ ಒಪ್ಪಿಸುತ್ತಾಳೆ ಎಂಬ ಐತಿಹ್ಯಗಳಿಂದ ಸ್ಪಷ್ಟವಾಗುತ್ತದೆ.

ಹುಲಿಗಿ ದೇವಸ್ಥಾನದ ಬಗೆಗೆ ಚಾರಿತ್ರಿಕ ಉಲ್ಲೇಖಗಳು ಹೆಚ್ಚು ಲಭ್ಯವಿಲ್ಲ ಆದರೆ ದೇವಸ್ಥಾನದ ಪಕ್ಕದಲ್ಲಿರುವ ಸೋಮೇಶ್ವರ ಲಿಂಗದ ಬಗ್ಗೆ ಶಾಸನವೊಂದು ಅದೇ ದೇವಾಲಯದಲ್ಲಿ ಲಭ್ಯವಿದ್ದು ಅದರ ಕಾಲ ಚಾಲುಕ್ಯ ವಿಕ್ರಮ ಶಕೆ ೧೩ (ಸು. ಕ್ರಿ.ಶ. ೧೩ನೆಯ ಶತಮಾನದು) ಎಂದು ಹೇಳಲಾಗಿದೆ. ಈ ಶಾಸನದ ಪ್ರಕಾರ ಇಲ್ಲಿ ಮೊದಲು ಚೌಡಿಭಟ್ಟನೆಂಬ ಬ್ರಾಹ್ಮಣನಿದ್ದ, ಆತನು ಕಾಮಕಾಯನ ಗೋತ್ರಕ್ಕೆ ಸೇರಿದ್ದ ಆತನ ಹೆಂಡತಿಯ ಹೆಸರು ಅಂಚಿಕಬ್ಬಿ ಇವರಿಬ್ಬರೂ ಸೋಮೇಶ್ವರನ ಅನನ್ಯ ಭಕ್ತರಾಗಿದ್ದರು ಜೊತೆಗೆ ಆ ಊರಿನ ಜನರಿಗೆ ತಮ್ಮ ಕೈಲಾದಷ್ಟು ಸಹಾಯ ಮಾಡುತ್ತಿದ್ದರು. ಇಲ್ಲಿ ಒಮ್ಮೆ ಮಳೆ ಬೀಳದೆ ಕ್ಷಾಮವು ತಲೆದೋರಿತು. ಆಗ ಚೌಡಿಭಟ್ಟನು ಊರಿನವರ ಸಹಾಯದಿಂದ ತುಂಗಭದ್ರ ನದಿಗೆ ಒಡ್ಡನ್ನು ಕಟ್ಟಿ ನೀರು ಊರೊಳಗೆ ಬರುವಂತೆ ವ್ಯವಸ್ಥೆ ಮಾಡಿದನು. ನದಿಯ ನೀರು ಕೃಷಿ ಭೂಮಿಗೆ ದೊರಕುವಂತಾಗಲು ಆತ ಕಾಲುವೆಗಳನ್ನು ನಿರ್ಮಿಸುತ್ತಾನೆ. ಇದರಿಂದಾಗಿ ಇಡೀ ಕ್ಷೇತ್ರ ಅಭಿವೃದ್ಧಿ ಹೊಂದಿತು. ಇದರಿಂದ ಸಂತೋಷಗೊಂಡ ಅರಸ ಚೌಡಿಭಟ್ಟನ ಸಮಾಜಸೇವೆಗೆ ಮೆಚ್ಚಿ ಉದಾರವಾಗಿ ಕಾಣಿಕೆಗಳನ್ನು ನೀಡಿ ಗೌರವಿಸುತ್ತಾನೆ. ಈ ಒಂದು ಉಲ್ಲೇಖ ಬಿಟ್ಟರೆ ಹುಲಿಗಿ ಬಗೆಗೆ ಬೇರಾವುದೇ ಚಾರಿತ್ರಿಕ ದಾಖಲೆಗಳು ಲಭ್ಯವಿಲ್ಲ.[೫]

೪. ಮಾದಿನೂರು :

ಮಾದಿನೂರು ಕೊಪ್ಪಳ ತಾಲೂಕಿನ ಪ್ರಾಚೀನ ಗ್ರಾಮಗಳಲ್ಲಿ ಒಂದು. ಕಲ್ಯಾಣ ಚಾಲುಕ್ಯರ ಕಾಲದ ಹೊತ್ತಿಗೆ ಇದು ಮಹಾ ಅಗ್ರಹಾರವಾಗಿ ಬೆಳೆದಿತ್ತು. ಶಾಸನಗಳಲ್ಲಿ ಮೋದಿತ ಗ್ರಾಮ, ಮೊಂದೆಯ ನೂರು, ಮೋದನೂರು, ಮೋದಯನೂರು ಎಂದು ಕರೆಸಿಕೊಂಡಿದೆ. ಇದು ಹಿಂದೆ ಎಡದೊರೆ ೨೦೦೦ರ ಕೆಳವಾಡಿ ೩೦೦ ಎಂಬ ಪ್ರಾಂತದಲ್ಲಿದ್ದು ಆ ಪ್ರಾಂತಕ್ಕೆ ತಿಲಕಪ್ರಾಯವಾಗಿತ್ತೆಂದು ಅಲ್ಲಿನ ಶಾಸನವು ವರ್ಣಿಸಲ್ಪಟ್ಟಿದೆ. ಮೋದಿತ ಗ್ರಾಮವು ೧೦ನೆಯ ಶತಮಾನದ ಹೊತ್ತಿಗೆ ಚಾಲುಕ್ಯರ ಅರಸನು ಬ್ರಹ್ಮಾಂಡ ಕೃತವನು ಪೂರ್ಣ ಮಾಡಿದಾಗ ಕಶ್ಯಪ ಗೋತ್ರದ ದ್ವೇದಿ ಚಟ್ಟೋಪಾಧ್ಯಾಯ ಸೋಮಯಾಜಿ ಎನ್ನುವವನಿಗೆ ಸ್ವರ ನಮಸ್ಯವಾಗಿ ಈ ಗ್ರಾಮವನ್ನು ಕೊಟ್ಟನು. ಅನಂತರ ಸೋಮಯಾಜಿಯು ಮಹಾ ವಿದ್ವಾಂಸರಾದ ೨೦ ಮಹಾಜನಗಳಿಗೆ ಇದನ್ನು ಧಾರೆಯರೆದು ಕೊಟ್ಟು, ಇಲ್ಲಿ ಖಂಡಸ್ಫುಟಿತ ಜೀರ್ಣೋದ್ಧಾರಕ್ಕಾಗಿಯೂ ದೇವರ ಅಂಗ ಭೋಗ, ನೈವೇದ್ಯ, ನಂದಾ ದೀವಿಗೆಗಾಗಿಯೂ ಹಲವು ಮತ್ತರು ಭೂಮಿಯನ್ನು ದಾನ ಕೊಟ್ಟನೆಂದು ಸ್ಪಷ್ಟವಾಗುತ್ತದೆ.[೬] ಈ ಅಗ್ರಹಾರದಲ್ಲಿ ಪ್ರಭಾಕರವನ್ನು ಕಲಿಸುವ ವ್ಯವಸ್ಥೆ ಮಾಡಲಾಗಿದ್ದು ಇದನ್ನು ಹೇಳಿಕೊಡುವ ಭಟ್ಟನಿಗೆ ಜೀವನೋಪಾಯಕ್ಕಾಗಿ ದತ್ತಿಗಳನ್ನು ಬಿಡಲಾಗಿತ್ತು. ವಿದ್ಯಾಭ್ಯಾಸಕ್ಕೆ ಸಂಬಂಧಿಸಿದ ಪ್ರಭಾಕರ ಮುಂತಾದ ವಿಷಯಗಳಲ್ಲಿ ಉಚ್ಚ ಶಿಕ್ಷಣವನ್ನು ಕೊಡುತ್ತಿದ್ದುದರಿಂದ ಈ ಅಗ್ರಹಾರವೂ ಅಂಥ ಒಂದು ಉತ್ತಮ ಶಿಕ್ಷಣ ಕೇಂದ್ರವಾಗಿತ್ತೆಂದು ಹೇಳಬಹುದಾಗಿದೆ. ಕುಕನೂರಿನ ಮಹಾಮಾಯಾ ದೇವಾಲಯದಲ್ಲಿರುವ ಕ್ರಿ.ಶ. ೧೧೭೪ಕ್ಕೆ ಸೇರಿದ ಕಳಚೂರ್ಯ ಅರಸರು ಸಂಕಮದೇವನ ಕಾಲದ ಶಾಸನದಲ್ಲಿ ಹಾಗೂ ಇನ್ನು ಅನೇಕ ಶಾಸನಗಳಲ್ಲಿ "ಚಕ್ರವರ್ತಿ ವಿನೋದದಿಂ ರಾಜ್ಯಂಗೆಯ್ಯುತ್ತು ಮಿರೆ"[೭] ಎಂಬ ಉಲ್ಲೇಖಗಳು ಬರುವುದರಿಂದ ಇದು ಕಳಚೂರ್ಯ ಅರಸರ ರಾಜಧಾನಿಯೋ ಅಥವಾ ಅಷ್ಟೇ ಮಹತ್ವದ ಪಟ್ಟಣವೋ ಆಗಿತ್ತೆಂದು ಸ್ಪಷ್ಟವಾಗುತ್ತದೆ.

೫. ಕುಮ್ಮಟದುರ್ಗ :

ಗಂಡುಗಲಿ ಕುಮಾರರಾಮನು ಇದ್ದುದು ಕುಮ್ಮಟದುರ್ಗದಲ್ಲಿ ಈಗ ಆ ಕುಮ್ಮಟ ದುರ್ಗವಿರುವುದು ನಮ್ಮ ಕೊಪ್ಪಳ ತಾಲ್ಲೂಕಿನಲ್ಲಿಯೆ ನಮ್ಮ ತಾಲ್ಲೂಕಿನ ಪೂರ್ವಕ್ಕೆ ಇರುವ ಕೊನೆಯ ಹಳ್ಳಿಗಳಾದ ಜಬ್ಬಲಗುಡ್ಡ ಹಾಗೂ ಹಳೆ ಕುಮಟಾ ಗ್ರಾಮಗಳ ಮಧ್ಯದಲ್ಲಿರುವ ಬೆಟ್ಟಗಳಲ್ಲಿಯೇ ಹಿಂದಿನ ಕುಮ್ಮಟದುರ್ಗ ರಾಜ್ಯವಿದ್ದದ್ದು. ಈಗಲೂ ಅಲ್ಲಿ ವಿಸ್ತಾರವಾಗಿರುವ ಕೋಟೆ ಕೊತ್ತಲಗಳನ್ನು, ಮುರುಕು ಮಂಟಪ, ಹಾಳಾದ ದೇವಾಲಯ, ಅರಮನೆಯ ಗುರುತು, ವೀರಗಲ್ಲುಗಳು, ಶಿಲಾ ಶಾಸನಗಳನ್ನು ನೋಡಬಹುದು. ಈಗಲೂ ಅಲ್ಲಿ ಪ್ರತಿವರ್ಷ ಕುಮಾರರಾಮನ ಬಲಿದಾನದ ಸ್ಮರಣಾರ್ಥವಾಗಿ ವೈಶಾಖ ಬಹುಳ ಅಷ್ಟಮಿಯ ದಿನ ಜಾತ್ರೆ ನೆರವೇರುತ್ತದೆ. ಈ ಜಾತ್ರೆಯಲ್ಲಿ ಇದೇ ತಾಲ್ಲೂಕಿನ ಇಂದರಗಿ ಎಂಬ ಗ್ರಾಮದಿಂದ ಆರು (ಕಟ್ಟಿಗೆಯ) ರುಂಡಗಳನ್ನು ಆನೆಗೊಂದಿಗೆ ಹತ್ತಿರದ ಮಲ್ಲಾಪುರ ಗ್ರಾಮದಿಂದ

ಎರಡು (ಹಿತ್ತಾಳೆ) ರುಂಡಗಳನ್ನು ಹಾಗೂ ಇತ್ತೀಚೆಗೆ ಜಬ್ಬಲ ಗುಡ್ಡದಿಂದ ನಾಲ್ಕು (ಕಟ್ಟಿಗೆ) ರುಂಡಗಳನ್ನು ಜಾತ್ರೆಗೆ ತರಲಾಗುತ್ತದೆ.[೮] ಇವುಗಳಿಗೆ ರಾಮಸ್ವಾಮಿ, ಕಂಪಿಲರಾಯ, ಕಾಟಣ್ಣ, ಸಂಗಮದೇವ, ಹೋಲಿಕೆ ರಾಮಣ್ಣ ಹಾಗೂ ಬೈಚಪ್ಪನೆಂದು ಕರೆಯಲಾಗುತ್ತದೆ. ಇವರೆಲ್ಲಾ ಕುಮ್ಮಟ ದುರ್ಗದ ರಾಜ್ಯದಲ್ಲಿದ್ದ ಪ್ರಸಿದ್ಧ ವ್ಯಕ್ತಿಗಳು. ಜಾತ್ರೆಯಲ್ಲಿ ರಾಮನಾಥನ ಮದುವೆ, ಯುದ್ಧ ಬಲಿದಾನಗಳನ್ನು ನಡೆಸಲಾಗುತ್ತದೆ.

ಕುಮ್ಮಟದುರ್ಗದಲ್ಲಿ ಐದು ಶಾಸನಗಳು ಕಂಡುಬರುತ್ತವೆ. ಕಂಪಿಲರಾಯನು ಆನೆಗೊಂದಿ, ಕುಮ್ಮಟದುರ್ಗ ಮತ್ತು ಹೊಸದಾಗಿ ನಿರ್ಮಿಸಿದ ಹೊಸಮಲೆದುರ್ಗದಲ್ಲೂ ಬಂದು ನೆಲೆಸಿದ್ದನೆಂಬುದಕ್ಕೆ ದಾಖಲೆಗಳಿವೆ. ಈ ನಡುವಿನ ಪ್ರದೇಶವೆಲ್ಲ ಇವರ ಆಡಳಿತಕ್ಕೆ ಒಳಪಟ್ಟ ಚಿಕ್ಕ ರಾಜ್ಯವಾಗಿತ್ತು. ಶತೃಗಳಿಗೆ ಅಭೇಧ್ಯ ಕೋಟೆಯಂತೆ ಕುಮ್ಮಟದುರ್ಗ ರಚನೆಯಾಗಿತ್ತು. ಕಂಪಿಲರಾಯನ ಕಾಲಕ್ಕೆ ಈ ರಾಜ್ಯದ ಪ್ರತಿಷ್ಠೆ ಹೆಚ್ಚಿತು. ಸುಲ್ತಾನನ ಕಣ್ಣು ಕುಕ್ಕುವಂತಾಯಿತು. ಅವನ ಸ್ವಾಭಿಮಾನಕ್ಕೆ ಈ ಚಿಕ್ಕ ರಾಜ್ಯ ಮುಳ್ಳಾಗಿತ್ತು. ಕೊನೆಯವರೆಗೂ ಸುಲ್ತಾನನ ಬೆದರಿಕೆಗಳಿಗೆ ಜಗ್ಗದೆ ದಿಟ್ಟತನದಿಂದ ಇಡಿ ದಕ್ಷಿಣ ಭಾರತದಲ್ಲಿ ಎದುರಾಗಿ ನಿಂತಿದ್ದು ಈ ಕುಮ್ಮಟ ರಾಜ್ಯವಾಗಿತ್ತು. ಕುಮಾರರಾಮನು ಒಬ್ಬ ಐತಿಹಾಸಿಕ ವ್ಯಕ್ತಿಯೆನ್ನುವುದರಲ್ಲಿ ಸಂದೇಹವಿಲ್ಲ ಚಿಕ್ಕಂದಿನಿಂದಲೇ ಅವನು ಸಾಹಸ ಕಲಿತನಗಳಿಗೆ ಹೆಸರಾಗಿದ್ದನು. ಮುಮ್ಮಡಿ ಸಿಂಗನಾಯ್ಕ, ಕಂಪಿಲರಾಯನ ಜೊತೆಗೆ ಕುಮಾರರಾಮನ ಕಲಿತನ ಮತ್ತು ಬಲಿದಾನದಿಂದ ಮಹಾನ್ ವಿಜಯನಗರದ ಸಾಮ್ರಾಜ್ಯ ಉದಯವಾಗಲು ಕಾರಣವಾಗಿದೆ. ವಿಜಯನಗರದ ಕೀರ್ತಿ ಉತ್ತುಂಗ ಶಿಖರಕ್ಕೆ ಏರಿದ ಸಂದರ್ಭದಲ್ಲಿಯೇ ಈ ಮೇಲಿನ ಕಾವ್ಯಗಳು ರಚಿತವಾಗಿವೆ. ಹಾಗೂ ಕುಮಾರರಾಮನ ಸ್ಮರಣಾರ್ಥವಾಗಿ ಅಲ್ಲಲ್ಲಿ ದೇವಾಲಯಗಳು ಕಟ್ಟಲ್ಪಟ್ಟಿವೆ. ಕುಮಾರರಾಮನ ಕುರಿತು ಅನೇಕ ಕೃತಿಗಳು ರಚನೆಯಾಗಿವೆ. ಅಲ್ಲಿರುವ ಅಪರೂಪದ ವೀರಗಲ್ಲುಗಳು, ಶಿಲಾಶಾಸನಗಳು ಕುಮ್ಮಟದುರ್ಗದ ಬಗ್ಗೆ ಮಾಹಿತಿ ನೀಡುವ ಪ್ರಮುಖ ದಾಖಲೆಗಳಾಗಿವೆ.[೯]

**೬. ಬಹದ್ದೂರ ಬಂಡಿ :**

ಕೊಪ್ಪಳ ತಾಲ್ಲೂಕಿನ ಪ್ರಮುಖ ಐತಿಹಾಸಿಕ ಸ್ಥಳಗಳಲ್ಲಿ ಒಂದಾದ ಬಹದ್ದೂರ ಬಂಡಿಯು ಇದು ತಾಲ್ಲೂಕಿನಿಂದ ಎರಡು ಕಿ.ಮೀ. ದೂರದಲ್ಲಿದೆ. ಈ ಗ್ರಾಮವು ಸಹ ಚಾರಿತ್ರಿಕ ನೆಲೆಯನ್ನು ಹಾಗೂ ಪ್ರಾಚೀನ ದೇವಾಲಯಗಳನ್ನು ಹೊಂದಿದೆ. ಕೊಪ್ಪಳ ಮತ್ತು ಬಹದ್ದೂರ ಬಂಡಿಯ ಸಂಬಂಧಗಳನ್ನು ವೃದ್ಧಿಸುವ ಪ್ರಮುಖ ಕೋಟೆ ಇಲ್ಲಿನದ್ದಾಗಿದೆ. ಹೈದರಾಲಿಯ ಪ್ರಮುಖ ಅಧಿಕಾರಿಯಾದ ಮಹಮ್ಮದ ಉಸ್ಮಾನ್ ಕೋವಾರ್ ಎಂಬುವನು ಕೊಪ್ಪಳ ಕೋಟೆಯ ೨ನೆಯ ಬಾಗಿಲನ್ನು ಬಹದ್ದೂರ ಬಂಡೆಯ ಕೋಟೆಯನ್ನು ನಿರ್ಮಿಸಿದನೆಂದು ಪ್ರಮುಖ ದಾಖಲೆಗಳು ತಿಳಿಸುತ್ತವೆ.[೧೦] ಬೃಹತ್ ಮತ್ತು ಅಖಂಡ ಬಂಡೆಯ ಮೇಲೆ ಕೋಟೆ ನಿರ್ಮಾಣಗೊಂಡಿರುವುದರಿಂದ ಇದಕ್ಕೆ ಬಹದ್ದೂರ ಬಂಡೆ ಎಂಬ ಹೆಸರು ಬಂದಿತ್ತೆಂದು ಸ್ಥಳೀಯರ ಅಭಿಪ್ರಾಯವಾಗಿದೆ.

## ೭. ಆನೆಗೊಂದಿ :

ಆನೆಗೊಂದಿ ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲ್ಲೂಕಿನಲ್ಲಿದೆ. ಗಂಗಾವತಿಯಿಂದ ನೈರುತ್ಯಕ್ಕೆ ೧೧ ಕಿ.ಮೀ. ದೂರದಲ್ಲಿ ತುಂಗಭದ್ರಾ ನದಿಯ ಎಡದಂಡೆಯ ಮೇಲಿದೆ. ಇದರ ಸಮೀಪದಲ್ಲಿ ನದಿಯ ಬಲದಂಡೆಯ ಮೇಲೆ ಹಂಪಿ ಇದೆ. ಆನೆಗೊಂದಿ ಪೌರಾಣಿಕ ಮಹತ್ವವುಳ್ಳ ಸ್ಥಳ. ಪಂಪಾದೇವಿಯು ಇಲ್ಲಿಯ ತುಂಗಭದ್ರಾ ನದಿಯ ಉತ್ತರ ದಂಡೆಯ ಮೇಲೆ ತಪಸ್ಸು ಮಾಡಿ ಶಿವನನ್ನು ಮೆಚ್ಚಿಸಿ ಮದುವೆಯಾದಳು. ನಂತರ ಪಂಪಾದೇವಿ ತಪ್ಪಸ್ಸು ಮಾಡಿದ ಸ್ಥಳವೆಂದು ಗುರುತಿಸಲಾಗುತ್ತದೆ. ಆನೆಗೊಂದಿಯ ರಾಮಾಯಣ ಕಾಲದ ಕಿಷ್ಕಿಂಧೆ ಪಟ್ಟಣವೆಂಬ ಪ್ರತೀತಿಯಿದೆ. ಹೀಗೆ ಆನೆಗೊಂದಿ ವಿಜಯನಗರ ಸಾಮ್ರಾಜ್ಯದ ಮಾತೃ ಸ್ಥಾನವಾಗಿ ಚಾರಿತ್ರಿಕ ಮಹತ್ವವನ್ನು ಪಡೆದಿದೆ. ಅಲ್ಲಿ ಪ್ರಾಗೈತಿಹಾಸ ಕಾಲದ, ಪುರಾಣ ಕಾಲದ ಹಾಗೂ ಇತಿಹಾಸ ಕಾಲದ ಅಪೂರ್ವ ಸ್ಮಾರಕಗಳಿದ್ದು ಅದೊಂದು ವಿಶಿಷ್ಟ ಚಾರಿತ್ರಿಕ ನೆಲೆ ಎನಿಸಿದೆ. ಆನೆಗೊಂದಿ ಗಂಗಾವತಿ ತಾಲ್ಲೂಕಿನ ಪ್ರಸಿದ್ಧವಾದ ಐತಿಹಾಸಿಕ ಸ್ಥಳ. ರಾಮಾಯಣದ ಕಾಲದಲ್ಲಿ ಕಿಷ್ಕಿಂಧೆಯಾಗಿದ್ದ ಈ ಊರನ್ನು ಶಾಸನವೊಂದು ಅದೇ ಹೆಸರಿನಿಂದ ಈಗಾಗಲೇ ಉಲ್ಲೇಖಿಸಲ್ಪಟ್ಟಿದೆ.[೧೧]

ಕ್ರಿ.ಶ. ೧೦-೧೧ ನೆಯ ಶತಮಾನಗಳಲ್ಲಿ ಇಲ್ಲಿ ಕಲ್ಯಾಣಿ ಚಾಲುಕ್ಯರು ಆಳ್ವಿಕೆ ಮಾಡುತ್ತಿದ್ದರು. ಚಾಲುಕ್ಯ ಅರಸ ಆಹವಮಲ್ಲ (ಎರಡನೇ ತೈಲ) ತನ್ನ ಮಹಾಮಂತ್ರಿ ಮಣ್ಣಮಯ್ಯನಿಗೆ ಭೂದಾನ ಮಾಡಿದ ಉಲ್ಲೇಖ ಪಂಪಾಸರಸ್ಸಿನ ಬಳಿ ಇರುವ ಶಾಸನದಲ್ಲಿದೆ. ಆನೆಗೊಂದಿಯ ಹೊರವಲಯದಲ್ಲಿ ಮುನಿರಾಬಾದ ರಸ್ತೆಯ ಎಡಕ್ಕೆ ಒಂದು ಅಗಸೆ ಇದೆ. ಈ ಅಗಸೆಯ ಹತ್ತಿರ ಇರುವ ಗವಿಯನ್ನು ದೇವಾಲಯವನ್ನಾಗಿ ಮಾರ್ಪಡಿಸಲಾಗಿದೆ. ಗವಿಯ ಎದುರಿಗೆ ಒಂದು ದೊಡ್ಡ ಕಲ್ಲಿನ ಮೇಲೆ ೧೪ನೆಯ ಶತಮಾನದ ಶಾಸನವಿದೆ. ಶಿವನು ತ್ರಿಪುರಾರಿ ದವ್ವೆಯ ಕುಮಾರ ಆನಂದ ಸಿದ್ಧನ ಭಕ್ತಿಗೆ ಮೆಚ್ಚಿ ಇದ್ದಲ್ಲಿಗೆ ಬಂದು ಪೂಜೆಗೊಂಡು ಈ ಗವಿಯಲ್ಲಿ ನೆಲಸಿದನೆಂದು ಶಾಸನದಲ್ಲಿ ಉಲ್ಲೇಖವಿದೆ. ಆನೆಗೊಂದಿಯ ಮತ್ತೊಂದು ಹೆಸರು ಹಸ್ತಿನಾವತಿ. ವಿಜಯನಗರ ಅರಸರ ಮೊದಲ ರಾಜಧಾನಿ. ಇಲ್ಲಿ ವಿಜಯನಗರ ಕಾಲದ ಅನೇಕ ಶಾಸನಗಳಿವೆ. ಅವುಗಳಲ್ಲಿ ಕೆಲವು ಜೈನಧರ್ಮಕ್ಕೆ ಸಂಬಂಧಿಸಿವೆ. ಜೈನ ಬಸದಿಯಲ್ಲಿರುವ ಶಾಸನದಿಂದ ಅದನ್ನು ವಿಜಯನಗರ ಅರಸ ಹರಿಹರನ ಆಳ್ವಿಕೆಯಲ್ಲಿ ಕ್ರಿ.ಶ. ೧೩೪೨ರಲ್ಲಿ ಬೈಚದಂಡನಾಯಕನ ಮಗ ಇರುಗಪದಂಡ ನಾಯಕನು ಕಟ್ಟಿಸಿದನೆಂದು ತಿಳಿಯುತ್ತದೆ.[೧೨] ವಿಜಯನಗರದಿಂದ ಆನೆಗೊಂದಿಗೆ ತುಂಗಭದ್ರಾ ನದಿಯ ಮೂಲಕ ಹರಿಗೋಲಲ್ಲಿ ಸಂಚರಿಸಬಹುದು. ಆನೆಗೊಂದಿ ಮತ್ತು ಹಂಪಿಯ ನಡುವೆ ಸಂಪರ್ಕದ ಸಲುವಾಗಿ ಸೇತುವೆ ನಿರ್ಮಿಸಿದಕ್ಕೆ ಸಾಕ್ಷಿಯಾಗಿ ನದಿಯ ಮಧ್ಯಭಾಗದಲ್ಲಿ ಕಂಬಗಳು ಈಗಲೂ ಸಾಕ್ಷಿಯಾಗಿ ನಿಂತಿವೆ.

## ೮. ಕನಕಗಿರಿ :

"ಕಣ್ಣಿದ್ದವರು ಕನಕಗಿರಿ ಕಾಲಿದ್ದವರು ಹಂಪೆ ನೋಡಬೇಕು" ಎನ್ನುವ ನೂರಾರು ವರ್ಷದ ಜನವಾಣಿ ಎಷ್ಟೊಂದು ಸೂಕ್ತವಾಗಿದೆಯೋ ಮತ್ತು ಸತ್ಯವೂ ಆಗಿದೆಯೋ ಹಾಗೆ ಈ ಭಾಗದಲ್ಲಿ

ಪ್ರಸಿದ್ಧವಾಗಿದೆ. ಕರ್ನಾಟಕ ಇತಿಹಾಸದಲ್ಲಿ ವಿಜಯನಗರದ ಮಾಂಡಲಿಕರ ರಾಜಧಾನಿಯಾಗಿ ಮೆರೆದ ಐತಿಹಾಸಿಕ ಹಿನ್ನೆಲೆಯ ಧಾರ್ಮಿಕ ಕ್ಷೇತ್ರವೇ ಅಂದಿನ ಸುವರ್ಣಗಿರಿಯೇ ಇಂದಿನ ಕನಕಗಿರಿ. ಕನಕಗಿರಿ ಪುರಾಣ ಪ್ರಸಿದ್ಧ ಕ್ಷೇತ್ರವೆನ್ನುವುದಕ್ಕೆ ಸ್ಕಂದ ಪುರಾಣದಲ್ಲಿ ಬರುವ ಶ್ರೀ ಲಕ್ಷ್ಮಿನರಸಿಂಹ ದೇವರ ವರ್ಣನೆಯೇ ಸಾಕ್ಷಿ. ಹಾಗೂ ದಾಯೇತ ಸ್ವರ್ಣಗಿರೀಶ್ವರಂ ಪುಷ್ಪಾನದಿ ತೀರವಾಸಿ, ಹೀಗೆ ಅನೇಕ ಸ್ತೋತ್ರಗಳಲ್ಲಿ ಶ್ರೀ ಕನಕಾಚಲ ದೇವರನ್ನು ಭಕ್ತಿ-ಭಾವದಿಂದ ಹೇಳಿರುವ ಉದಾಹರಣೆಗಳಿವೆ. ಹಾಗೆ ತುಂಗಾ ತೀರದ ವಿರೂಪಾಕ್ಷ ಕ್ಷೇತ್ರ ಹಂಪಿಯಿಂದ ಉತ್ತರ ಆರು ಹರಿದಾರಿಯ ಅಂತರದಲ್ಲಿ ಎರಡು ಸಣ್ಣ ನದಿಗಳ (ಪುಷ್ಪಾ ಜಯಂತಿ) ಸಂಗಮ ತೀರದಲ್ಲಿ ಕನಕಗಿರಿ ಇದೆ ಎಂಬುದು ಪುರಾಣ ಸತ್ಯ ಜೊತೆಗೆ ಅಶೋಕ ಸಾಮ್ರಾಜ್ಯ ದಕ್ಷಿಣದ ಪ್ರಾದೇಶಿಕ ಕೇಂದ್ರವಾಗಿತ್ತು.ಇದೇ ಅಂದಿನ 'ಸುವರ್ಣಗಿರಿ'ಯಾಗಿತ್ತು. ಮತ್ತು ಕನಕಗಿರಿಯೇ ಸುವರ್ಣಗಿರಿಯೆಂಬ ಊಹೆಗೆ ಸಮರ್ಥಕವಾಗುವಂತೆ ವಿಜಯನಗರದ ಮಾಂಡಲಿಕರ ರಾಜಧಾನಿ ಕನಕಗಿರಿಯ ಇಪ್ಪತ್ತೈದು ಮೈಲಿ (೪೨ ಕಿ.ಮೀ) ದೂರವಿರುವ ಕೊಪ್ಪಳ ಮತ್ತು ಮಸ್ಕಿ ಎಂಬಲ್ಲಿ ಅಶೋಕನ ಶಾಸನಗಳು ದೊರೆತಿವೆ.

ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲ್ಲೂಕಿನ ಕನಕಗಿರಿ ನಗರ ಐತಿಹಾಸಿಕ ಪ್ರಸಿದ್ಧ ಸ್ಥಳ. ಇಲ್ಲಿಯ ದೇವತೆ ಕನಕಾ ಚಲಪತಿ ಲಕ್ಷ್ಮಿನರಸಿಂಹ ದೇವಾಲಯವು ವಿಜಯನಗರ ಕಾಲದಲ್ಲಿ ಪ್ರಸಿದ್ಧಿ ಪಡೆಯುತ್ತೆಂಬುದು ಶಾಸನಗಳಿಂದ ಉಲ್ಲೇಖಿಸಲ್ಪಟ್ಟಿವೆ. ಶಾಲಿವಾಹನ ೧೩೫೮ರಲ್ಲಿ ಪುಷ್ಪ ಜಯಂತಿ ತೀರದಲ್ಲಿ ಉದ್ಭವಗೊಂಡ ಕನಕಗಿರಿನಾಥ ದೇವರಿಗೆ ಮಹಾರಾಜಧಿರಾಜ ಪರಮೇಶ್ವರ ಶ್ರೀ ವೀರ ಪ್ರತಾಪ ಪ್ರೌಢ ದೇವರಾಯ ಮಹಾರಾಯನು ದೇವರ ಅಮೃತಪಡಿ ಮತ್ತು ಪೂಜಾ ಅಲಂಕಾರಗಳಿಗಾಗಿ ಕನಕಗಿರಿ ಪೇಟೆಯನ್ನು ದತ್ತಿಯಾಗಿ ನೀಡಿದ್ದು ಮತ್ತೊಬ್ಬ ಅರಸನಾದ ಸಾಳುವ ನರಸಿಂಹನು ಕೀಲಕ ಸಂವತ್ಸರದ ಶ್ರವಣ ಬಹುಳ ೮ ರಲ್ಲಿ ಅಂದರೆ ಶಾಲಿವಾಹನ ಶಕೆ ೧೪೧೦ರಲ್ಲಿ ಈ ದೇವರಿಗೆ ಗೊಡೆನೆ ಹಾಳು ಮತ್ತು ಬ್ಯಾಡೆ ಗ್ರಾಮಗಳನ್ನು ದತ್ತಿಯಾಗಿ ನೀಡಿದ್ದು ಕ್ರಿ.ಶ. ೧೫೧೨-೧೩ರಲ್ಲಿ ವಿಜಯನಗರ ಪ್ರಸಿದ್ಧ ಅರಸನಾದ ಶ್ರೀ ಕೃಷ್ಣ ದೇವರಾಯನು ಕನಕಗಿರಿಯ ಪೇಟೆಯ ಎಲ್ಲಕಂದಾಯವನ್ನು ದಾನ ದತ್ತಿಯಾಗಿ ನೀಡಿದ್ದನ್ನು ಶಾಸನಗಳಲ್ಲಿ ಉಲ್ಲೇಖಿಸಲ್ಪಟ್ಟಿವೆ.[೧೩]

ಅಚ್ಯುತ ದೇವಾರಾಯನು ಕ್ರಿ.ಶ. ೧೫೩೩-೩೪ರಲ್ಲಿ (ವಿಜಯ ಸಂವತ್ಸರ ಮಾಘ ಶುದ್ಧ ಸಪ್ತಮಿ) ಕನಕಗಿರಿ ದೇವರಿಗೆ ದೀಪಾರಾಧನೆ ನಿತ್ಯ ಅಲಂಕಾರ, ಪೂಜೆ, ರಥ, ಜಾತ್ರೆಗಾಗಿ ವಿಶೇಷ ಸೇವೆಗೆಂದು ಇಂಗಳದ ಹಾಳು ಅಚ್ಯುತರಾಯ ಮಲ್ಲಾಪುರ ಸಂಗನಾಳು ರಾಮಪುರ ಗ್ರಾಮಗಳ ಕಂದಾಯವನ್ನು ಮಾಫಿ ಮಾಡಿ ದೇವರಿಗೆ ದತ್ತಿ ಕೊಟ್ಟು ಈ ಗ್ರಾಮಗಳ ಸರ್ವಾಧಿಕಾರವನ್ನು ದೇವರಿಗೆ ಅರ್ಪಿಸಿದ್ದಾನೆ. ಕ್ರಿ.ಶ. ೧೬೭೪ರ ಶಾಸನವು ಕನಕಗಿರಿಯ ನಾಯಕರು ಆಳುತ್ತಿದ್ದ ಮಾಹಿತಿಯನ್ನು ತಿಳಿಸುತ್ತದೆ. ಇಮ್ಮಡಿ ಉಡಚ ನಾಯಕನು ಮಹಾನಾಯಕಾಚಾರ್ಯ ಮತ್ತು ನಾಯಕ ಶಿರೋಮಣಿಯೆಂದು ಸಂಭೋದಿಸಿದ್ದಲ್ಲದೆ ಶ್ರೀ ಕನಕಾಚಲ ಲಕ್ಷ್ಮಿನರಸಿಂಹ ಸ್ವಾಮಿಯು ತನ್ನ ಮನೆಯ ದೇವತೆ ಮತ್ತು ರೂಢಿಯೇ ಶ್ರೇಷ್ಠನೆಂದು ಪೋಷಿಸುವ ಶಾಸನದಲ್ಲಿ ವೇದ ಉಪನಿಷತ್ತುಗಳ ವಾಕ್ಯಗಳನ್ನು ಉದ್ಧರಿಸಲಾಗಿದೆ.[೧೪] ಹೀಗೆ ಈ

ಶಾಸನಗಳನ್ನು ಗಮನಿಸಿದ ಮೇಲೆ ಕೆಲವರು ಕೆಲವು ಸ್ಥಳೀಯ ಕಥೆಗಳನ್ನು ಹೇಳುತ್ತಾ ಬಂದಿದ್ದಾರೆ. ಅದೇನೆ ಇರಲಿ ಕನಕಗಿರಿ ಮಾಂಡಲೀಕದ ದೊರೆಗಳಲ್ಲಿ ಬಹುರಾಜರು ತಮ್ಮ ಕಾರ್ಯ ಚಟುವಟಿಕೆ ಕುರಿತು ಲಿಖಿತವಾದ ಶಾಸನಗಳು ಕಂಡುಬರುವುದು ವಿರಳ. ಆದರೆ ಸದ್ಯಕ್ಕೆ ಕನಕರಾಯನ ಗುಡಿಯಲ್ಲಿ ನಿಲ್ಲಿಸಿರುವ ಮೂರು ಶಿಲಾಶಾಸನಗಳು ಮಾತ್ರ ನೋಡುಗರಿಗೆ ಲಭ್ಯವಾಗುತ್ತವೆ.

**೯. ಹೇಮಗುಡ್ಡ :**

ಇದು ಗಂಗಾವತಿ ಕೊಪ್ಪಳ ರಸ್ತೆಯಲ್ಲಿ ಮುಕ್ಕುಂಪಿ ಬಳಿಯಿದೆ. ಇದೊಂದು ಭಾಗಶಃವಾಗಿ ನೈಸರ್ಗಿಕ ಕೋಟೆಯಂತೆ ಕಂಡುಬರುತ್ತದೆ. ಇಲ್ಲಿ ಪೂರ್ವ ಹಾಗೂ ದಕ್ಷಿಣಾಭಿಮುಖವಾಗಿ ಎರಡು ಬೆಟ್ಟಗಳು ಕೂಡಿಕೊಂಡಿದ್ದು ಅವರೆಡರ ಮಧ್ಯದಲ್ಲಿ ೮೦ ಕೋನದ ಸ್ಥಳಾವಕಾಶ ಉಂಟಾಗಿದೆ. ಕೋಟೆಯ ಒಳಭಾಗದಲ್ಲಿ ಬೆಟ್ಟಕ್ಕೆ ಹೊಂದಿಕೊಂಡಂತಿರುವ ಗುಂಡೊಂದರಲ್ಲಿ ಅಚ್ಯುತಾಪುರದ ಸುಲಿಪ ಬಸವಣ್ಣನ ಮಾನ್ಯ ಎಂದಿದೆ ಪ್ರಾಯಶಃ ಕೋಟೆ ನಿರ್ಮಾಣಕ್ಕೆ ಪೂರ್ವ ಇಲ್ಲಿಯ ಜಮೀನನ್ನು ಅಚ್ಯುತಾಪುರದ ಬಸವಣ್ಣ ದೇವರಿಗೆ ದತ್ತಿಯಾಗಿ ಬಿಟ್ಟಿರಬೇಕೆಂದು ತೋರುತ್ತದೆ. ಕೋಟೆ ಭಾಗದಲ್ಲಿ ಒಂದು ದೊಡ್ಡ ಶಿವಪಾರ್ವತಿ ದೇವಾಲಯ, ಲಕ್ಷ್ಮಿ ನರಸಿಂಹ (ಕನಕಾಚಲ) ದೇವಾಲಯ, ಆಂಜನೇಯ ದೇವಾಲಯ, ದುರ್ಗಾ ದೇವಾಲಯ ಮತ್ತು ಅರಮನೆಯಂತಹ ಕಟ್ಟಡ ಮತ್ತು ವಾಸದ ಮನೆಗಳ ಅವಶೇಷಗಳಿವೆ.[೧೫]

ಎಮ್ಮಿಗುಡ್ಡ ಕೋಟೆಯು ಕನಕಗಿರಿಯ ಪಾಳೆಯಗಾರರ ಚರಿತ್ರೆಯಲ್ಲಿ ಮುಖ್ಯ ಪಾತ್ರ ವಹಿಸಿತ್ತು. ಇಲ್ಲಿಯ ಕನಕಗಿರಿಯ ಇಮ್ಮಡಿ ಉಡಚನಾಯಕ ಸುರಪುರದ ಪಿತಾಂಬರಿ ಬಹರಿ ಪಿಡ್ಡ ನಾಯಕನಿಗೆ ಒಂದು ವರ್ಷ ಅಡಗಿಸಿಟ್ಟು ಔರಂಗಜೇಬನಿಂದ ಅವನನ್ನು ರಕ್ಷಿಸುತ್ತಾನೆ. ಕನಕಗಿರಿಯ ಪತನಕ್ಕೆ ಸಂಬಂಧಿಸಿದ ಹಿರೇನಾಯಕ ಹಾಗೂ ಸುರಪುರದ ಪಾಮನಾಯಕನ ನಡುವಿನ ಕಾಳಗ ಇಲ್ಲಿಯೇ ನಡೆದಿರಬೇಕು ಎಂದು ಊಹಿಸಬಹುದಾಗಿದೆ, ಹೀಗೆ ಚಾರಿತ್ರಿಕ ಮಹತ್ವ ಹೊಂದಿದ್ದ ಪ್ರಮುಖ ಐತಿಹಾಸಿಕ ಸ್ಥಳಗಳಲ್ಲಿ ಇದು ಕೂಡ ಒಂದಾಗಿದೆ.

**೧೦. ಕುಷ್ಟಗಿ :**

ಹೈದ್ರಾಬಾದ್ ಕರ್ನಾಟಕ ವ್ಯಾಪ್ತಿಯಲ್ಲಿ ಬರುವ ಕೊಪ್ಪಳ ಜಿಲ್ಲೆಯ ಇನ್ನೊಂದು ತಾಲ್ಲೂಕು ಕೇಂದ್ರವಾದ ಕುಷ್ಟಗಿ ಪಟ್ಟಣವು ವಿಶೇಷಗಳಿಗೆ ವಿಶೇಷವಾಗಿದೆ. ಐತಿಹಾಸಿಕ ಸ್ಥಳಗಳಲ್ಲಿ ಇದು ಕೂಡ ಒಂದಾಗಿದೆ. ಕೃಷ್ಣ, ತುಂಗಭದ್ರಾ ತೊರೆಗಳ ನಡುವಣ ಎಡೆಯಲ್ಲಿರುವ ಈ ಪ್ರದೇಶವು ಶ್ರೀಮಂತ ಸಾಂಸ್ಕೃತಿಕ ಇತಿಹಾಸವನ್ನು ಹೊಂದಿದೆ. ಚಾರಿತ್ರಿಕವಾಗಿ ಶಿಲಾಯುಗದ ಮಾನವನಷ್ಟು ಪ್ರಾಚೀನತೆಯನ್ನು ಹೊಂದಿದ್ದು, ಪೌರಾಣಿಕವಾಗಿ ರಾಮಾಯಣದಷ್ಟು ಹಿಂದಕ್ಕೆ ಗುರುತಿಸಬಹುದಾಗಿರುವ ಇದು ಶಿಲಾಯುಗ ಮಾನವ ನೆಲಸಿದ್ದ ಪರಿಸರದ ನಡುವೆ ಇರುವುದು ಗಮನಾರ್ಹ. ಈ ನೆಲೆಯ ಬಗ್ಗೆ ವೈಜ್ಞಾನಿಕವಾಗಿ ಉತ್ಖನನ ಮಾಡಿದರೆ ಮತ್ತಷ್ಟು ಮಹತ್ವದ ಅಂಶಗಳನ್ನು ಬೆಳಕಿಗೆ ತರುವ ಸಾಧ್ಯತೆಗಳಿವೆ. ನಿಲೋಗಲ್-ಕುಷ್ಟಗಿ ರಸ್ತೆಯಲ್ಲಿ ಸ್ವಲ್ಪ ಒಳಹೋದಂತೆ ಇರುವ ಗುಡ್ಡದ ದೇವಾಲಾಪುರದಲ್ಲಿ ಬೃಹತ್ ಶಿಲಾಯುಗ

ಸಂಸ್ಕೃತಿಯ ಕಲ್ಲುಗೋರಿಗಳಂತಹ ಒಂದೆರಡು ನಿರ್ಮಿತಿಗಳಿವೆ. ಅವನ್ನು ಸ್ಥಳೀಯವಾಗಿ ಅಜ್ಜಯ್ಯನ ಗುಡಿ ಎಂದು ಹೇಳುವ ವಾಡಿಕೆ ಇದೆಯಾದರೂ. ಅವು ಬೃಹತ್ ಶಿಲಾಸಂಸ್ಕೃತಿಯ ಕಲ್ಗೋರಿಗಳೆಂದು ಹೇಳಲು ಇನ್ನಷ್ಟು ಪುರಾವೆಗಳ ಅವಶ್ಯಕತೆ ಇದೆ. ಹಾಗೆಯೇ ಕುಷ್ಟಗಿಯನ್ನು ಶಾಸನ ಇತಿಹಾಸದಲ್ಲಿ ಅವಲೋಕಿಸಿದಾಗ ಕ್ರಿ.ಶ. ೧೫೩೩ರ ಅಚ್ಯುತರಾಯನ ಕನಕಗಿರಿ ಶಾಸನಗಳು ಕುಷ್ಟಗಿ ಪ್ರಾಂತ್ಯವು ಕನಕಗಿರಿಗೆ ಒಳಪಟ್ಟಿತ್ತೆಂದು ತಿಳಿಸುತ್ತದೆ.[೧೬]

ಈ ತಾಲ್ಲೂಕಿನ ಇತಿಹಾಸವನ್ನು ಮೌರ್ಯರೊಂದಿಗೆ ಗುರುತಿಸುವುದಾದರೂ, ಮೌರ್ಯರ ಶಾಸನಗಳಾವೂ ಈ ತಾಲ್ಲೂಕಿನಲ್ಲಿ ಪತ್ತೆಯಾಗಿಲ್ಲ. ಆದರೆ ನೆರೆಯ ಕೊಪ್ಪಳದ ಗವಿಮಠ ಹಾಗೂ ಪಾಲ್ಕಿಗುಂಡು ಲಿಂಗಸೂರು ತಾಲ್ಲೂಕಿನ ಮಸ್ಕಿಯಲ್ಲಿ ಮೌರ್ಯ ಸಾಮ್ರಾಟ ಅಶೋಕನ ಕಿರು ಶಿಲಾ ಲೇಖನಗಳು ಪತ್ತೆಯಾಗಿದ್ದು, ಅಶೋಕನ ಶಿಲಾ ಶಾಸನಗಳಿರುವ ಪರಿಸರದಲ್ಲಿ ಇರುವ ಕುಷ್ಟಗಿ ತಾಲ್ಲೂಕಿನ ಮೇಲೂ ಮೌರ್ಯರು ಹಿಡಿತ ಹೊಂದಿದ್ದರೆಂದು ತಿಳಿದುಕೊಳ್ಳಬಹುದಾಗಿದೆ. ಮೌರ್ಯರ ನಂತರ ಶಾತವಾಹನರಿಂದ ಕದಂಬರು, ಬಾದಾಮಿ ಚಾಲುಕ್ಯರಿಂದ ಹಿಡಿದು ಬ್ರಿಟೀಷರ ಆಳ್ವಿಕೆಯ ನಂತರ ಹೈದ್ರಾಬಾದ್ ನಿಜಾಮನ ಆಳ್ವಿಕೆಯ ವರೆಗೂ ಒಳಪಟ್ಟಿತ್ತೆಂದು ದಾಖಲೆಗಳಿಂದ ತಿಳಿದುಬರುತ್ತದೆ. ಗೋಳಗುಮ್ಮಟ, ಹಿಂದೂ ಇಸ್ಲಾಂ ಶೈಲಿಯ ತಾಜಮಹಲ್ ಇವುಗಳು ಐತಿಹಾಸಿಕ ಸ್ಥಳಗಳ ಚಾರಿತ್ರಿಕ ಹಾಗೂ ಸಾಂಸ್ಕೃತಿಕ ಪರಂಪರೆಯನ್ನು ಹೊಂದಿದೆ ಎಂಬುದು ಗಮನಾರ್ಹವಾಗಿದೆ.

### ೧೧. ಪುರ :

ಪುರ ಗ್ರಾಮವು ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲ್ಲೂಕಿನ ಪ್ರಮುಖ ಐತಿಹಾಸಿಕ ಸ್ಥಳಗಳಲ್ಲಿ ಒಂದು. ಒಂದು ಕೋಟಿ ಎಂಟು ಲಿಂಗಗಳ ತಾಣ. ಸುಮಾರು ಹನ್ನೆರಡು ಶಿಲಾಶಾಸನಗಳ ಉಗ್ರಾಣ. ಶಿಲ್ಪಕಲೆಯ ತವರೂರಂತಿರುವ ಪುರವು ಒಂದು ಪೌರಾಣಿಕ ಧಾರ್ಮಿಕ ಐತಿಹಾಸಿಕ ಪ್ರೇಕ್ಷಣೀಯ ಸ್ಥಳವಾಗಿದ್ದು ತಾಲ್ಲೂಕಿನ ವಾಣಿಜ್ಯ ರಾಣಿಯಂತಿರುವ ತಾವರಗೇರಿಯಿಂದ ೭ ಕಿ.ಮೀ. ದೂರದಲ್ಲಿದೆ. ಕಲ್ಲು, ಗೋಪುರ, ಲಿಂಗ, ಶಾಸನಗಳೆಲ್ಲ ಇದೆ. ಇಲ್ಲಿನ ಕಲ್ಲಿನ ವೈಶಿಷ್ಟ್ಯ. ಅಂತೆಯೇ ಇಲ್ಲಿ ಶಿಲೆಯು ಅರಳಿ ಕಲೆಯಾಗಿ ನಿಂತಿದೆ. ಲಿಂಗವಾಗಿ ಕುಂತಿದೆ. ಶಾಸನಗಳಿಂದ ಶಾಶ್ವತ ಇತಿಹಾಸ ಪುಸ್ತಕಾಲಯದಂತಿದೆ.

ಇಲ್ಲಿಯ ಕೋಟಿ ಲಿಂಗಗಳಿಗೊಂದು ಸ್ವಾರಸ್ಯಕರವಾದ ಮಹಾಭಾರತದ (ದಂತ) ಕಥೆಯಿದೆ. ಆದರೆ ಇದರ ಯಾವುದೇ ದಾಖಲೆಗಳ ಬಗ್ಗೆ ಉಲ್ಲೇಖವಿಲ್ಲ. ತೃಟಿತ ಸಂಕಮದೇವ ರಾಜ್ಯವನ್ನಾಳುತ್ತಿದ್ದ ಉಲ್ಲೇಖವಿದೆ. ಮುಖ್ಯವಾಗಿ ಇಲ್ಲಿಯ ಬಸವರಸ, ಅಯ್ಯಪರಸ, ಕೇಶದೇವ ಹದಿನೈದು ಸಮಯದವರು ಸಕ್ರಮಣದಲ್ಲಿ ಕೊಟ್ಟ ದಾನ ಶಾಸನಗಳಲ್ಲಿ ಉಲ್ಲೇಖವಿದೆ. ಗವರೇಶ್ವರ ಪೂಜೆ ಪುನಸ್ಕಾರಕ್ಕೆ ನೈವೇದ್ಯಕ್ಕೆ ಗಾಣವನ್ನು ಗಾಣಿಗರು ನಂದಾದೀಪಕ್ಕೆಂದು ಸೊಳಸಿಗೆ ಎಣ್ಣೆಯನ್ನು ದವಸ, ಅಡಿಕೆ, ಅರಶಿನ ಮೆಣಸಿನ ಮೇಲಿನ ತೆರಿಗೆಯನ್ನು ಮುವ್ಮರಿ ದಂಡಗಳು ಮತ್ತು ಪ್ರಜೆಗಳು ಬೇರೆ ಬೇರೆ ದಾನಗಳನ್ನು ನೀಡಿದ ಬಗ್ಗೆ ಕೊಲಿಂಗೇಶ್ವರ ದೇವಾಲಯದ ಬಳಿಯ ಅಗಸಿಯ ಗೋಡೆಗೆ ಸೇರಿರುವ ಶಾಸನದಲ್ಲಿ ಉಲ್ಲೇಖವಿದೆ.[೧೭]

ಹೀಗೆ ಕುಷ್ಟಗಿ ತಾಲ್ಲೂಕಿನ ಪುರ ಗ್ರಾಮವು ಪ್ರಮುಖ ಐತಿಹಾಸಿಕ ಸ್ಥಳಗಳ ಚಾರಿತ್ರಿಕ ಹಿನ್ನೆಲೆಯನ್ನು ಹೊಂದಿದೆ.

## ೧೨. ಚಂದ್ರಗಿರಿ :

ವಿಸ್ಮಯ ಹಾಗೂ ವಿಶೇಷಗಳ ತಾಣಗಳನ್ನು ತನ್ನ ಮಡಿಲಿನಲ್ಲಿ ಇರಿಸಿಕೊಂಡ ಶ್ರೇಯಸ್ಸು ಕುಷ್ಟಗಿ ತಾಲ್ಲೂಕಿನ ಚಂದ್ರಗಿರಿಗೆ ಸಲ್ಲುತ್ತದೆ. ಈ ತಾಲ್ಲೂಕಿನ ಹನುಮಸಾಗರದಿಂದ ಪಶ್ಚಿಮಕ್ಕೆ ೫ ಕಿ.ಮೀ. ದೂರದಲ್ಲಿರುವ ಪ್ರಾಚೀನನೆಲೆಯನ್ನು ಚಂದಾಲಿಂಗ ದೇವಾಲಯವನ್ನು ಹೊಂದಿರುವ ಪ್ರದೇಶವೆ ಚಂದ್ರಗಿರಿ ಎಂದು ಕರೆಯಲಾಗಿದೆ. ಈ ಚೆಂದಾಲಿಂಗವು ವಿಜಾಪುರದ ಸುಲ್ತಾನನ ಕಾಲದಲ್ಲಿ 'ಚಂದ್ರಗಿರಿ' ಎಂಬುದು ಒಂದು ಮಂಡಲವಾಗಿತ್ತೆಂದು ಅಭಿನವ ತಿರುಪತಿಯ ಇತಿಹಾಸದಲ್ಲಿ ತಿಳಿದುಬಂದಿದೆ. ಚೆಂದಾಲಿಂಗದಲ್ಲಿರುವ ಏಕೈಕ ಶಿಲಾಶಾಸನದ ಪ್ರಕಾರ "ಶಕ ೧೨೬೭ ಪ್ರಾರ್ಥಿವ ಸಂವತ್ಸರದ ಪೂರ್ಣಮಿ ಗುರುವಾರವೆಂದಿದ್ದು ಬಂಡಾರಿ ಹೆಗ್ಗಡೆ ಮಾರಮಯ್ಯಾರು ಗದ್ದೆ ಕೊಟ್ಟ ಇತ್ಯಾದಿ ಉಲ್ಲೇಖಗಳಿವೆ"[೧೮] ಇದು ತ್ರುಟಿತವಾಗಿದ್ದರಿಂದ ಯಾರ ಕಾಲದ್ದೆಂದು ನಿಖರವಾಗಿ ಹೇಳಲಾಗದಿದ್ದರೂ, ಕಲ್ಯಾಣಿ ಚಾಲುಕ್ಯರ ೬ನೇ ವಿಕ್ರಮಾದಿತ್ಯನ ಕಾಲದಲ್ಲಿ ಈ ದೇಗುಲಗಳ ಸಮುಚ್ಚಯ ಸುಂದರವಾದ ಕೋಟೆ ಇತ್ಯಾದಿ ನಿರ್ಮಾಣಗೊಂಡಿವೆ ಎಂಬುದು ಐತಿಹಾಸಿಕ ದಾಖಲೆಗಳಿಂದ ತಿಳಿದುಬರುತ್ತದೆ.

## ೧೩. ಇಟಗಿ :

ಕೊಪ್ಪಳ ಜಿಲ್ಲೆಯ ಯಲಬುರ್ಗಾ ತಾಲ್ಲೂಕಿನ ಅತ್ಯಂತ ಪ್ರಾಚೀನ ಚಾರಿತ್ರಿಕ ಐತಿಹಾಸಿಕ ಸ್ಥಳವನ್ನು ಹೊಂದಿರುವ 'ಇಟಗಿ' ಗ್ರಾಮವು ಯಲಬುರ್ಗಾ ತಾಲ್ಲೂಕಿನಿಂದ ೩೦ ಕಿ.ಮೀ ಅಂತರದಲ್ಲಿದೆ. ಇಟಗಿ ಪದದ ಉತ್ಪತ್ತಿ: 'ಇಟ್ಟಿಗೆ' ಎನ್ನುವ ಈ ಹೆಸರೇ ಹಿಂದೆ ಇದು ಒಂದು ಅಗ್ರಹಾರವಾಗಿದ್ದಿತೆಂಬ ಅಂಶವನ್ನು ಸೂಚಿಸುತ್ತದೆ. ಸಂಸ್ಕೃತದಲ್ಲಿ ಇಷ್ಟಿ, ಇಷ್ಟಿಕಾ ಎಂಬ ಪದಗಳು ಅಗ್ನಿಯನ್ನು ಪ್ರತಿನಿಧಿಸುತ್ತವೆ. ಅಲ್ಲದೆ ಯಜ್ಞಕುಂಡಗಳನ್ನು ಇಟ್ಟಿಗೆಗಳಿಂದ ನಿರ್ಮಿಸುವ ಧಾರ್ಮಿಕ ಪರಂಪರೆ ಇದೆ. ಇಟ್ಟಿಗೆಯ ಶಾಸನದಲ್ಲಿ ಹೋಮ ಧೂಮದ ವರ್ಣನೆ ಬರುವುದರಿಂದ ಈ ಹೋಮ ಕುಂಡಗಳಿಂದಾಗಿಯೇ ಇಷ್ಟಿಕಾ ಎಂಬ ಹೆಸರು ಈ ಗ್ರಾಮಕ್ಕೆ ಬಂದಿರಬೇಕು. ಕಾಲ ಕ್ರಮೇಣ ಇಟ್ಟಿಗೆ ಇಟಗಿ ಎಂದು ರೂಪಾಂತರ ಹೊಂದಿರಬೇಕೆಂಬುದು ಶಾಸನಗಳಲ್ಲಿ ಉಲ್ಲೇಖವಿದೆ.[೧೯]

ಇಲ್ಲಿ ಕಲ್ಯಾಣಿ ಚಾಲುಕ್ಯ ಚಕ್ರವರ್ತಿ ಆರನೆಯ ವಿಕ್ರಮಾದಿತ್ಯನ ದಂಡನಾಯಕರಲ್ಲೊಬ್ಬನಾದ ಮಹಾದೇವ ದಂಡನಾಯಕನು ಬರೆಯಿಸಿದ ಶಿಲಾಶಾಸನವೊಂದಿದೆ. ಈ ಶಾಸನದ ಕಾಲ ಕ್ರಿ.ಶ. ೧೧೧೨. ಈ ಶಾಸನದಲ್ಲಿ ದಂಡನಾಯಕ ಕಟ್ಟಿಸಿದ ಮಹಾದೇವ ದೇವಾಲಯದ ಅವನ ಊರಾದ ಇಟ್ಟಿಗೆ ಮಹಾಗ್ರಹಾರ ರಮ್ಯವಾದ ವರ್ಣನೆ ಇದೆ. ಈ ಅಗ್ರಹಾರ "ಕನಕಾದ್ರಿಯಂತೆ ವಿಭುದಾಶ್ರಯ"ವಾಗಿತ್ತು. ನಿಸರ್ಗ ಸೌಂದರ್ಯದ ಬೀಡಾಗಿದ್ದಿತು. ಶಾಸನಕಾರ ಕಣ್ಣಿಗೆ ಕಟ್ಟುವಂತೆ ಇದನ್ನು ವರ್ಣಿಸಿದ್ದಾನೆ. ಮಹಾದೇವ ದಂಡನಾಯಕನು ದೇವಾಲಯದ ಚಕ್ರವರ್ತಿ ಎಂಬ ಅಭಿದಾನಕ್ಕೆ ಪಾತ್ರವಾದ ಭವ್ಯವೂ

ಸುಂದರವೂ ಆದ ಶೈವ ದೇವಾಲಯವನ್ನು ಇಲ್ಲಿ ನಿರ್ಮಿಸಿದನು. ತಂದೆಯ ನೆನಪಿಗಾಗಿ ಮೂರ್ತಿನಾರಾಯಣ ತಾಯಿಯ ಸ್ಮರಣಾರ್ಥ 'ಚಂದಲೇಶ್ವರ' ದೇವಾಲಯಗಳನ್ನು ಕಟ್ಟಿಸಿದ ದಂಡನಾಯಕ ಸರಸ್ವತಿ ಮಠವನ್ನು ಕೂಡ ನಿರ್ಮಿಸಿದನೆಂದು ಈ ಶಾಸನ ಸಾರುತ್ತದೆ. ಇಟಗಿ ಮಹಾದೇವ ದೇವಾಲಯವನ್ನು ಶಾಸನಕಾರ 'ದೇವಾಲಯಗಳ ಚಕ್ರವರ್ತಿ' ಎಂದು ವರ್ಣಿಸಿದ್ದಾನೆ.

**೧೪. ಕುಕನೂರು :**

ಕುಕನೂರು ಯಲಬುರ್ಗಾ ತಾಲ್ಲೂಕಿಗೆ ಸೇರಿದ ಅಪಾರವಾದ ಐತಿಹಾಸಿಕ ಪರಂಪರೆಯನ್ನು ಹೊಂದಿದ ಮಧ್ಯಮ ಗಾತ್ರದ ಪಟ್ಟಣ 'ಚಂದ್ರಹಾಸನಪುರ' ಕುಂತಲಪುರವೆಂದು ದಂತ ಕತೆಗಳಲ್ಲಿ ಕರೆಯಿಸಿಕೊಂಡ ಸ್ಥಳವು ಅಗ್ರಹಾರವಾಗಿತ್ತೆಂದು ಮತ್ತು 'ಕುಕ್ಕನೂರು ಮೂವತ್ತು' ತ್ರಿಂಶದ್ವಾ್ರ ಮಾಧಿಪತಿ ಮುಂತಾದ ಬೇರೆ ಬೇರೆ ಹೆಸರುಗಳೂ ಇದ್ದವೆಂದು ಇಲ್ಲಿರುವ ಶಿಲಾಶಾಸನಗಳಿಂದ ತಿಳಿದುಕೊಳ್ಳಬಹುದು. ಶಿಕ್ಷಣ ಕೇಂದ್ರವಾದ ಮಹಾಗ್ರಹಾರವಾಗಿ ಮೂವತ್ತು ಗ್ರಾಮಗಳ ಆಡಳಿತ ಘಟಕದ ಕೇಂದ್ರವಾಗಿ ಈ ಗ್ರಾಮ ಶತ ಶತಮಾನಗಳ ಏಳು ಬೀಳುಗಳನ್ನು ಕಂಡಿದೆ. ಶಾಸನಗಳು ಕುಕನೂರನ್ನು ಸಹಸ್ರ ಮಹಾಜನಗಳ ಬೀಡಾಗಿದ್ದ ಮಹಾಗ್ರಹಾರವೆಂದು ಉಲ್ಲೇಖಿಸುತ್ತವೆ.[೨೦]

ಇತಿಹಾಸ ಪೂರ್ವಕಾಲದಿಂದಲೂ ಮಾನವನ ನೆಲೆಯಾಗಿದ್ದ ಈ ತಾಣ ಬಾದಾಮಿಯ ಚಾಲುಕ್ಯರ ಕಾಲದಿಂದಲೂ ರಾಜಕೀಯ ಹಾಗೂ ಧಾರ್ಮಿಕ ಕೇಂದ್ರವಾಗಿದ್ದುದನ್ನು ಇಲ್ಲಿರುವ ಶಾಸನಗಳು ಉಲ್ಲೇಖಿಸುತ್ತವೆ. ಪ್ರಖ್ಯಾತ ಶಿಕ್ಷಣ ಕೇಂದ್ರವಾಗಿದ್ದಂತೆ ಇದೊಂದು ಧಾರ್ಮಿಕ ಕೇಂದ್ರ ಕೂಡ ಆಗಿದ್ದಿತು. ಸ್ಥಳೀಯ ಐತಿಹ್ಯದ ಪ್ರಕಾರ ಇಂದಿನ ಕುಕನೂರೇ ಹಿಂದಿನ 'ಕುಂತಳಪುರ'ವಾಗಿದ್ದಿತು. ಚಂದ್ರಹಾಸನ ರಾಜಧಾನಿಯಾಗಿದ್ದರಿಂದ 'ಚಂದ್ರಹಾಸಪುರ'ವೆಂಬ ಹೆಸರು ಈ ಗ್ರಾಮಕ್ಕೆ ಇದ್ದಿತು.[೨೧] ಚಂದ್ರಹಾಸನು ಉಗ್ರ ತಪಸ್ಸನ್ನು ಆಚರಿಸಿ ದೇವಿಯನ್ನು ಒಲಿಸಿಕೊಂಡು ನಂತರ ಅವಳನ್ನು ಇಲ್ಲಿಯೇ ಪ್ರತಿಷ್ಠಾಪಿಸಿದನಂತೆ! ಅವಳೇ ಮಹಾಮಾಯೆ, ಹೀಗೆಂದು ಒಂದು ದಂತಕಥೆ ಈ ಭಾಗದಲ್ಲಿ ಪ್ರಚಲಿತವಿದೆ. ಕಲೆ ಮತ್ತು ವಾಸ್ತುಶಿಲ್ಪದ ದೃಷ್ಟಿಯಿಂದಲೂ ಕುಕನೂರು ಮಹತ್ವವನ್ನು ಪಡೆದ ಸ್ಥಳ, ಸುಂದರವೂ ಪ್ರಾಚೀನವೂ ಆದ ಅನೇಕ ದೇವಾಲಯಗಳು ಇಲ್ಲಿವೆ. ಮಹಾಮಾಯಾ ದೇವಾಲಯದ ಪಕ್ಕದಲ್ಲಿರುವ ನವಲಿಂಗೇಶ್ವರ ಹಾಗೂ ಇಟ್ಟಿಗೆಯ ರಸ್ತೆಯಲ್ಲಿರುವ ಮೂಲಸ್ಥಾನ ಕಲ್ಲೇಶ್ವರನ ದೇವಾಲಯಗಳು ವಾಸ್ತುಶಿಲ್ಪದ ದೃಷ್ಟಿಯಿಂದ ಮಹತ್ವದ ರಚನೆಗಳು. ಹಿಂದೆ ಶೈಕ್ಷಣಿಕವಾಗಿ, ರಾಜಕೀಯವಾಗಿ, ಧಾರ್ಮಿಕವಾಗಿ, ವಾಸ್ತುಶಿಲ್ಪದ ನೆಲೆಯಾಗಿ ಹಾಗೂ ಚಾರಿತ್ರಿಕ ಮಹತ್ವದ ಸ್ಥಾನವನ್ನು ಪಡೆದುಕೊಂಡಿದೆ.

**೧೫. ಕಲ್ಲೂರು :**

ಕೊಪ್ಪಳ ಜಿಲ್ಲೆಯ ಯಲಬುರ್ಗಾ ತಾಲ್ಲೂಕಿನ ಕಲ್ಲೂರು ಒಂದು ಪುಟ್ಟ ಗ್ರಾಮ. ಈ ಗ್ರಾಮವು ಚಿಕ್ಕದಾದರೂ ಪ್ರಾಚೀನ ಕಾಲದಿಂದಲೂ ಚಾರಿತ್ರಿಕ ಹಾಗೂ ಪ್ರಮುಖ ಐತಿಹಾಸಿಕ ಸ್ಥಳವೆಂದು ಖ್ಯಾತಿಯನ್ನು ಪಡೆದುಕೊಂಡಿದೆ. ಇದಕ್ಕೆ ಮುಖ್ಯ ಕಾರಣ ಇಲ್ಲಿಯ ಶ್ರೀ ಕಲ್ಲಿನಾಥೇಶ್ವರ ಈ ಕಲ್ಲಿನಾಥನ ಪ್ರಾಚೀನ ಉಲ್ಲೇಖ ಕ್ರಿ.ಶ. ೧೦೯೮ರವರೆಗೂ ಈ ದೇವಾಲಯವನ್ನು ಸ್ವಯಂಭು ಕಲಿದೇವಸ್ವಾಮಿ

ಎಂದೇ ಕರೆದಿರುವುದು ಇಲ್ಲಿಯ ಶಾಸನಗಳಿಂದ ಸ್ಪಷ್ಟವಾದ ಉಲ್ಲೇಖವಿದೆ. ಇದರಿಂದ ಈ ದೇವಾಲಯಕ್ಕೆ ಇದ್ದ ಪ್ರಾಚೀನ ಹೆಸರು. "ಕಲಿದೇವಸ್ವಾಮಿ" ಮುಂದೆ ಕ್ರಿ.ಶ. ೧೪೭೨ನೆಯ ಶಾಸನದಲ್ಲಿ ಇದನ್ನು "ಕಲ್ಲೂರ, ಕಲ್ಲಯ್ಯ ದೇವರು" ಎಂದು ನಾನಾ ಹೆಸರುಗಳಿಂದ ಕರೆಯಲಾಗಿದೆ. ಇಲ್ಲಿಯ ಕಲ್ಲಿನಾಥೇಶ್ವರ ದೇವಾಲಯದ ದೇವರು ಯಾರು? ಯಾವಾಗ? ಸ್ಥಾಪಿಸಿದರು ಎಂಬುದರ ಬಗ್ಗೆ ಉಲ್ಲೇಖ ಎಲ್ಲಿಯೂ ದೊರೆಯುವುದಿಲ್ಲ.[೨]

ಆದರೆ ಕಾಲಾನುಕ್ರಮೇಣವಾಗಿ ಬದಲಾಗುತ್ತ ಬಂದಿರುವ ಈ ದೇವಾಲಯದ ಕಟ್ಟಡ ಸಮುಚ್ಚಯದಲ್ಲಿ ಗರ್ಭಗುಡಿ, ಸುಖನ್ಯಾಸಿಗಳ ಶಿಲ್ಪಗಳ ಶಿಲ್ಪಕಲೆಯನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ಇದು ಬಾದಾಮಿಯ ಚಾಲುಕ್ಯರ ಕಾಲ (ಕ್ರಿ.ಶ. ೮-೯ನೆಯ ಶತಮಾನದ)ದ್ದೆಂಬುದು ಸ್ಪಷ್ಟವಾಗುತ್ತದೆ.

**೧೬. ಮುಧೋಳ :**

ಕೊಪ್ಪಳ ಜಿಲ್ಲೆಯ ಯಲಬುರ್ಗಾ ತಾಲೂಕಿನ ಪ್ರಮುಖ ಐತಿಹಾಸಿಕ ಹಾಗೂ ಚಾರಿತ್ರಿಕ ಹಿನ್ನೆಲೆಯನ್ನು ಮುಧೋಳ ಗ್ರಾಮವು ಹೊಂದಿದೆ. ಈ ಗ್ರಾಮವು ತಾಲ್ಲೂಕಿನಿಂದ ೧೫ ಕಿ.ಮೀ ಅಂತರದಲ್ಲಿದೆ. ಹಿಂದೆ ಈ ಗ್ರಾಮವನ್ನು ಮುದಾವೊಳಲು ಎಂಬ ಹೆಸರಿನಿಂದ ಕರೆಯಲಾಗುತ್ತಿತ್ತೆಂದು ಶಾಸನದಲ್ಲಿ ಉಲ್ಲೇಖವಿದೆ.[೨] ಈ ಗ್ರಾಮದಲ್ಲಿ ದೊರೆತ ಪ್ರಾಚೀನ ಅವಶೇಷಗಳೆಂದರೆ ಪ್ರಾಚೀನ ದೇವಾಲಯಗಳಾದ ತ್ರಿಲಿಂಗೇಶ್ವರ ದೇವಾಲಯ ಮತ್ತು ಮಲ್ಲಿಕಾರ್ಜುನ ದೇವಾಲಯ. ೬೦೦ ವರ್ಷಗಳ ಹಿಂದಿನ ಕೋಟೆಯ ಗೋಡೆಯೂ ಇದೆ. ಮಲ್ಲಿಕಾರ್ಜುನ ಗುಡಿಯ ಎಡಭಾಗಕ್ಕೆ ಕ್ರಿ.ಶ. ೮೯೮ ರ ಒಂದು ವೀರಗಲ್ಲು ಶಾಸನ ರಾಷ್ಟ್ರಕೂಟರ ಇಮ್ಮಡಿ ಕೃಷ್ಣನನ್ನು ಉಲ್ಲೇಖಿಸುತ್ತದೆ. ಹೀಗೆ ಪ್ರಮುಖವಾಗಿ ಯಲಬುರ್ಗಾ ತಾಲ್ಲೂಕಿನ ಸಾಂಸ್ಕೃತಿಕ ಪಂರಪರೆಯನ್ನು ಹೊಂದಿರುವ ಮುಧೋಳ ತನ್ನದೇ ಆದ ಪ್ರಾಮುಖ್ಯತೆಯನ್ನು ಹೊಂದಿದೆ.

**ಟಿಪ್ಪಣಿಗಳು**

೧. ಟಿ.ಆರ್.ಚಂದ್ರಶೇಖರ್, **ಜಿಲ್ಲಾ ಅಭಿವೃದ್ಧಿ ಅಧ್ಯಯನ ಕೊಪ್ಪಳ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯, ಪುಟ -೨೪

೨. ಪ್ರೊ.ಅಲ್ಲಮಪ್ರಭು ಬೆಟ್ಟದೂರು, ಎಚ್.ಎಸ್.ಪಾಟೀಲ, **'ತಿರುಳ್ಗನ್ನಡ'**, ಸವಿಸಂಚಿಕೆ, ೧೯೯೩, ಪುಟ ೦೫-೦೬

೩. ಬಸವರಾಜ ವೀ ಮೂಲಿಮನಿಯವರ ಪ್ರಿಯಾಂಕ ಮಾಸಪತ್ರಿಕೆಯಲ್ಲಿ **ಅವನತಿಯ ಅಂಚಿನಲ್ಲಿ ಇರಕಲ್ಲ ಗಡಕೋಟೆ ಪ್ರಕಟಗೊಂಡ** (ಲೇ) ಸೆಪ್ಟಂಬರ್, ೨೦೦೦, ಪುಟ ೨೧-೨೨

೪. ಡಾ.ಪುರುಷೋತ್ತಮ ಬಿಳಿಮಲೆ, **ಹುಲಿಗೆಮ್ಮ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯, ಪುಟ ೦೧

೫. ಅದೇ, ಪುಟ ೨-೩

೬. ಡಾ.ಕೆ.ಎಂ.ಸುರೇಶ, (ಸಂ) , **ಕರ್ನಾಟಕ ದೇವಾಲಯ ಕೋಶ ಕೊಪ್ಪಳ ಜಿಲ್ಲೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧, ಪುಟ ೩೪

೭. ಡಾ.ಎಸ್.ಎಂ.ವೃಷಭೇಂದ್ರಸ್ವಾಮಿ, (ಸಂ) **ಗವಿದೀಪ್ತಿ,** ಶ್ರೀ ಗವಿಸಿದ್ಧೇಶ್ವರ, ಕೃಪಾ ಪೋಷಿತ ವಿದ್ಯಾರ್ಥಿ ಬಳಗ ಶ್ರೀ ಗವಿಮಠ, ಕೊಪ್ಪಳ, ೧೯೭೬ ಪುಟ ೧೪೪

೮. ಪ್ರೊ.ಅಲ್ಲಮಪ್ರಭು ಬೆಟ್ಟದೂರು, ಎಚ್.ಎಸ್.ಪಾಟೀಲ, **'ತಿರುಳ್ಗನ್ನಡ',** ಸವಿಸಂಚಿಕೆ, ಕೊಪ್ಪಳ, ೧೯೯೩, ಪುಟ ೩೬

೯. ಅದೇ, ಪುಟ ೧೨-೧೩

೧೦. ಡಾ.ಕೆ.ಎಂ.ಸುರೇಶ, (ಸಂ), **ಕರ್ನಾಟಕ ದೇವಾಲಯ ಕೋಶ ಕೊಪ್ಪಳ ಜಿಲ್ಲೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧, ಪುಟ ೬೩

೧೧. ಡಾ.ಶರಣಬಸಪ್ಪ ಕೋಲ್ಕಾರ, **ಅಕ್ಷಯ ಸವಿಸಂಚಿಕೆ,** ಗಂಗಾವತಿ ತಾಲ್ಲೂಕು, ಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನ, ೨೦೦೨, ಪುಟ ೧೭

೧೨. ಅದೇ, ಪುಟ ೧೨

೧೩. ಅಲ್ಲಾ ಗಿರಿರಾಜ ಕನಕಗಿರಿ, **ಪುಣ್ಯಕ್ಷೇತ್ರ ಕನಕಗಿರಿ,** ಶ್ರೀರಾಮ ಪ್ರಕಾಶನ ಕನಕಗಿರಿ ೨೦೦೬, ಪುಟ ೪೩

೧೪. ಅದೇ, ಪುಟ ೧೨

೧೫. ಡಾ.ಶರಣಬಸಪ್ಪ ಕೋಲ್ಕಾರವರ, ಪ್ರಜಾಪ್ರಪಂಚ, ದಿನ ಪತ್ರಿಕೆಯಲ್ಲಿ ಪ್ರಕಟಗೊಂಡ **(ಎಮ್ಮಿ) ಹೇಮ ಗುಡ್ಡಕೋಟೆಯ ಚರಿತ್ರೆ,** (ಲೇ), ೫-೧೦, ೧೯೯೮, ಪುಟ ೧೬

೧೬. ಕೆ.ಶರಣಬಸಪ್ಪ ನಿಡಶೇಸಿ, **ಕೃಷ್ಣಗಿರಿ ಸಾಹಿತ್ಯ ಸಿರಿ ಸವಿಸಂಚಿಕೆ,** ಕುಷ್ಟಗಿ ತಾಲೂಕು, ಕನ್ನಡ ಸಾಹಿತ್ಯ ಪರಿಷತ್, ೨೦೦೨, ಪುಟ ೨೭

೧೭. ಅದೇ, ಪುಟ ೩೭-೩೮

೧೮. ಅದೇ, ಪುಟ ೩೯-೪೦

೧೯. ಪ್ರೊ.ಅಲ್ಲಮಪ್ರಭು ಬೆಟ್ಟದೂರು, ಎಚ್.ಎಸ್.ಪಾಟೀಲ, **'ತಿರುಳ್ಗನ್ನಡ',** ಸವಿಸಂಚಿಕೆ ಕೊಪ್ಪಳ, ೧೯೯೩, ಪುಟ ೩೩-೩೪

೨೦. ಅದೇ, ಪುಟ ೩೨

೨೧. ಅದೇ, ಪುಟ ೩೩

೨೨. ಡಾ.ಬಿ.ವ್ಹಿ.ಶಿರೂರ ಕಲ್ಲೂರ, **ಶ್ರೀ ಕಲ್ಲಿನಾಥೇಶ್ವರ,** ಕಲ್ಲಿನಾಥೇಶ್ವರ ಟ್ರಸ್ಟ್ ಕಮಿಟಿ ಕಲ್ಲೂರು, ತಾಲೂಕು ಯಲಬುರ್ಗಾ, ೨೦೦೬, ಪುಟ ೦೧

೨೩. ಪ್ರೊ.ಅಲ್ಲಮಪ್ರಭು ಬೆಟ್ಟದೂರು, ಎಚ್.ಎಸ್.ಪಾಟೀಲ, **'ತಿರುಳ್ಗನ್ನಡ'** ಸವಿಸಂಚಿಕೆ, ಕೊಪ್ಪಳ, ೧೯೯೩, ಪುಟ ೩೪

# ನಾಲ್ಕು

## ಐತಿಹಾಸಿಕ ಸ್ಥಳಗಳ ಸಾಂಸ್ಕೃತಿಕ ನೋಟ : ಕೊಪ್ಪಳ

# ನಾಲ್ಕು

## ಐತಿಹಾಸಿಕ ಸ್ಥಳಗಳ ಸಾಂಸ್ಕೃತಿಕ ನೋಟ : ಕೊಪ್ಪಳ

### ೧. ಕೊಪ್ಪಳ :

ಸಾಂಸ್ಕೃತಿಕ ಪರಂಪರೆಯನ್ನು ಅಲ್ಲಿಯ ರಾಜಕೀಯ, ಸಾಮಾಜಿಕ, ಮತ್ತು ಸಾಹಿತ್ಯ ಶಿಲ್ಪಗಳ ಹಿನ್ನೆಲೆಯಲ್ಲಿ ವಿವೇಚಿಸಲಾಗುತ್ತದೆ. ಅಲ್ಲದೆ ನೂತನ ಶಿಲಾಯುಗ, ಬೃಹತ್ ಶಿಲಾಯುಗ ಕಾಲದಲ್ಲೂ ಪ್ರಸಿದ್ಧಿ ಪಡೆದಿದ್ದ ಬಗ್ಗೆ ದೊರೆತಿರುವ ಹಲವಾರು ನೆಲೆಗಳು ಚರಿತ್ರೆಯಲ್ಲಿ ಉಲ್ಲೇಖವಾಗಿವೆ. ಚರಿತ್ರೆಯ ಕಾಲಕ್ಕೆ ಬಂದರೆ ಅಶೋಕನ ಎರಡು ಶಾಸನಗಳು ಕೊಪ್ಪಳದಲಿಯೇ ದೊರೆತಿವೆ.

ಕೊಪ್ಪಳ ನಗರದಲ್ಲಿಯ ಪ್ರಮುಖ ಐತಿಹಾಸಿಕ ಸ್ಥಳಗಳೆಂದರೆ ಮಳೆಮಲ್ಲೇಶ್ವರ ದೇವಾಲಯ, ಶಿರಸಪ್ಪಯ್ಯನ ಮಠ, ಗವಿಮಠ, ಪಾರ್ಶ್ವನಾಥ, ತೀರ್ಥಂಕರ ಬಸದಿ, ಅಶೋಕನ ಶಿಲಾಶಾಸನಗಳು, ಬೌದ್ಧ ವಿಹಾರಗಳು, ಜೈನರ ಬಸದಿಗಳು, ನಗರದ ಕೋಟೆ, ಹೈದ್ರಾಬಾದ ನಿಜಾಮನ ಆಳ್ವಿಕೆಯಲ್ಲಿ ನಿರ್ಮಾಣಗೊಂಡ ಕಮಾನುಗಳು ಇತ್ಯಾದಿ ಈ ನಗರದ ಪ್ರಮುಖ ಐತಿಹಾಸಿಕ ಸ್ಥಳಗಳೆಂದು ಗುರುತಿಸಲಾಗಿದೆ. ಈ ಸ್ಥಳಗಳ ಪರಿಚಯದ ಕಡೆ ಗಮನ ಹರಿಸುವುದಾದರೆ ಅವುಗಳು ಈ ಮುಂದಿನಂತಿವೆ.

**ಮಳೆ ಮಲ್ಲೇಶ್ವರ ದೇವಾಲಯ :** ಕೊಪ್ಪಳ ನಗರದ ಪಶ್ಚಿಮ ಭಾಗದ ನಿಸರ್ಗದ ಮಡಿಲಲ್ಲಿ ಹಾಗೂ ಪ್ರಾಕೃತಿಕ ಸೊಗಡುಗಳಿಂದ ಕಂಗೊಳಿಸುತ್ತಿರುವ ಮಳೆಮಲ್ಲೇಶ್ವರ ದೇವಾಲಯ ರಾಮಾಯಣ ಕಾಲದಲ್ಲಿ ವಾನರ ಧ್ವಜವೆಂತಲೂ ಮಹಾಭಾರತದ ಕಾಲದಲ್ಲಿ ಇಂದ್ರಕೀಲ ಪರ್ವತವೆಂತಲೂ ಮತ್ತು ಮಳೆಮಲ್ಲೇಶ್ವರ ದೇವರು ಎಂದು ಕರೆಯುವ ರೂಢಿ ಹಿಂದಿನ ಕಾಲದಿಂದಲೂ ಬಂದ ಸಂಪ್ರದಾಯವಾಗಿದೆ. ಈ ದೇವಾಲಯವು ಗರ್ಭಗುಡಿ ಮಾತ್ರ ಹೊಂದಿದ್ದು. ಈ ಗರ್ಭಗುಡಿಯನ್ನು ಇತ್ತೀಚೆಗೆ ಪುನರ್ ನಿರ್ಮಿಸಲಾಗಿದೆ ಈ ಹಿಂದೆ ಇಲ್ಲಿ ದೇವಾಲಯವಿದ್ದ ಸಾಧ್ಯತೆಗಳಿವೆ. ಗರ್ಭಗುಡಿಯಲ್ಲಿ ಶಿವಲಿಂಗವಿದೆ.

ಇದು ನೆಲ ಮಟ್ಟದಲ್ಲಿದ್ದು ಸರ್ವಕಾಲದಲ್ಲಿಯೂ ನೀರಿನಲ್ಲಿರುತ್ತದೆ.[೧] ಈ ದೇಗುಲದ ಮುಂಭಾಗದಲ್ಲಿ ಎರಡು ನಂದಿ ಹಾಗೂ ಗಣೇಶ ಶಿಲ್ಪಗಳಿವೆ. ಈ ಶಿಲ್ಪ ಮತ್ತಿತರ ಅವಶೇಷಗಳಿಂದ ಮಳೆ ಮಲ್ಲಪ್ಪ ದೇವಾಲಯವು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಿರ್ಮಾಣಗೊಂಡಿರಬಹುದೆಂದು ಹೇಳಬಹುದು.

**ಶಿರಸಪ್ಪಯ್ಯನ ಮಠ :** ಹಿಂದೂ-ಮುಸ್ಲಿಂ ಶೈಲಿಗಳ ಸಮ್ಮಿಲನಗಳ ಪ್ರತೀಕವಾದ ದೇಗುಲವಿದು. ಇದನ್ನು ಸ್ಥಳೀಯರು ಶಿರಸಪ್ಪಯ್ಯನ ಮಠವೆಂದೇ ಕರೆಯುತ್ತಾರೆ. ಶಿರಸಪ್ಪಯ್ಯನೆಂಬುವನು ಒಬ್ಬ ಸೂಫಿ ಸಂತ, ಈತ ೧೭-೧೮ನೆಯ ಶತಮಾನದಲ್ಲಿ ಬದುಕಿದ್ದನೆಂಬುದಕ್ಕೆ ದಾಖಲೆಗಳ ಉಲ್ಲೇಖವಿದೆ. ಇಲ್ಲಿನ ಮುಖ್ಯ ಗರ್ಭಗುಡಿಯಲ್ಲಿ ಶಿರಸಪ್ಪಯ್ಯನದೆಂದು ಹೇಳಲಾದ ಗದ್ದುಗೆಯನ್ನು ಕಾಣಬಹುದು. ಮೂರು ಗರ್ಭಗುಡಿಗಳನ್ನು ಹೊಂದಿದ ಈ ದೇಗುಲದ ಎಡಬದಿಯ ಗರ್ಭಗುಡಿಯಲ್ಲಿ ವೀರಭದ್ರನ ಕಂಚಿನ ಪ್ರತಿಮೆ ಇದೆ. ಬಲಬದಿಯಲ್ಲಿ ಯಾವುದೇ ಮೂರ್ತಿಯಿಲ್ಲ. ಮುಖ್ಯ ಗರ್ಭಗುಡಿಯ ಬಾಗಿಲಿನಲ್ಲಿ ಪದ್ಮವಿದೆ. ಸಭಾಮಂಟಪದಲ್ಲಿ ಎರಡು ಕಪ್ಪನೆ ಶಿಲೆಯ ಕಂಬಗಳಿವೆ. ಇವು ಹೊಯ್ಸಳ ಶೈಲಿಯಲ್ಲಿದ್ದು ಅತ್ಯಂತ ನಯ ಹಾಗೂ ಹೊಳಪಿನಿಂದ ಕೂಡಿದೆ. ಇವುಗಳನ್ನು ತಿರುಗಣೆಯಂತ್ರ ಬಳಸಿ ತಯಾರಿಸಲಾಗಿದೆ.[೨] ಸಭಾಮಂಟಪ ಮುಂಬದಿಯಲ್ಲಿ ಹಿಂದೂ-ಮುಸ್ಲಿಂ ಶೈಲಿಯ ಕಮಾನಿನಾಕಾರದಲ್ಲಿ ಕಲ್ಲು ಮತ್ತು ಗಾರೆಗಳಿಂದ ಕಟ್ಟಲಾದ ರಚನೆಗಳಿವೆ. ಅದರ ಎಡ ಮತ್ತು ಬಲಭಾಗಗಳಲ್ಲಿ ಚಾಲಂದ್ರಗಳನ್ನು ಬೆಳಕಿನ ಸಲುವಾಗಿ ನಿರ್ಮಿಸಿರುವರು. ಈ ಮಠವು ಹಿಂದೂ ಮತ್ತು ಮುಸ್ಲಿಂ ಧರ್ಮಗಳ ಜನರ ಪೂಜ್ಯನೀಯ ಸ್ಥಳವಾಗಿದೆ. ಇಲ್ಲಿ ಮೊಹರಂ ಹಬ್ಬದ ಸಂದರ್ಭದಲ್ಲಿ ವಿಶೇಷ ಉತ್ಸವ, ಆಚರಣೆಗಳು ನಡೆಯುತ್ತಿದ್ದು ಸ್ಥಳೀಯರಾದ ಎಲ್ಲಾ ವರ್ಗದವರು ಇದರಲ್ಲಿ ಭಾಗವಹಿಸುತ್ತಾರೆ. ಅಲ್ಲದೆ ಕತ್ತಲು ರಾತ್ರಿಯ ದಿನ ಇಲ್ಲಿ 'ಕಾರಣಿಕ' ಹೇಳುವ ಸಂಪ್ರದಾಯವೂ ಇದೆ. ಈ ಮಠದ ಅರ್ಚಕರು ವಿಶ್ವಕರ್ಮ ಜನಾಂಗದವರು, ಇದಕ್ಕೆ ಸುಲ್ತಾನರ ಕಾಲದಲ್ಲಿ ಕಟ್ಟಲಾದ ಮಹಾದ್ವಾರವಿದೆ. ಇದು ಕೂಡ ಹಿಂದೂ-ಮುಸ್ಲಿಂ ಶೈಲಿಯಲ್ಲಿದೆ. ಮಠದ ಆವರಣದಲ್ಲಿ ಕಲ್ಯಾಣ ಚಾಲುಕ್ಯರ ಕಾಲದ ಕಂಬಗಳು, ಭೈರವಿ ಮೊದಲಾದ ಶಿಲ್ಪಗಳನ್ನು ಕಾಣಬಹುದು. ಹಾಗೆಯೇ ಈ ಮಠದ ಮುಂಭಾಗದಲ್ಲಿ ಇದರ ಅರ್ಚಕರ ಪೂರ್ವಜರ ಸಮಾಧಿಗಳಿವೆ.

**ಗವಿಮಠ :** ಕೊಪ್ಪಳ ಜಿಲ್ಲೆಯ ಐತಿಹಾಸಿಕ ಪ್ರಸಿದ್ಧ ಮಠಗಳಲ್ಲಿ ಗವಿಮಠವು ಒಂದು. ಈ ಪ್ರದೇಶದ ಶೈಕ್ಷಣಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಇಂದಿಗೂ ಮಹತ್ವದ ಪಾತ್ರವನ್ನು ವಹಿಸುತ್ತಿದೆ. ಗವಿಮಠವಿರುವ ಬೆಟ್ಟದ ಪರಿಸರವು ಪ್ರಾಚೀನ ನೆಲೆಗಳಲ್ಲೊಂದು. ಇಲ್ಲಿ ನೈಸರ್ಗಿಕ ಗುಹೆಗಳಿದ್ದು ಪ್ರಾಚೀನ ಮಾನವನ ತಾಣಗಳು ಹೌದು. ಗವಿಮಠದ ಪ್ರಮುಖ ಸ್ಮಾರಕಗಳಲ್ಲಿ ಗವಿಯ ಮುಂದೆ ಕಟ್ಟಲಾದ ದೇಗುಲ ಮಠದ ವಿಶಾಲ ಮಂಟಪಗಳನ್ನು ಹೊಂದಿದ ಕಟ್ಟಡ ವಿವಿಧ ಕಾಲಗಳಲ್ಲಿ ಆಗಿಹೋದ ಸ್ವಾಮಿಗಳ ಗದ್ದುಗೆಗಳು, ಗದ್ದುಗೆಗಳಿಗೆಂದು ಕಟ್ಟಿದ ಕಟ್ಟಡಗಳು, ಅನ್ನಪೂರ್ಣೇಶ್ವರಿ ದೇಗುಲ ಕಲ್ಯಾಣ ಮಂಟಪ ಮುಂತಾದವು ಸೇರಿವೆ.

ಇವುಗಳಲ್ಲಿ ಕಳೆದ ದಶಕಗಳಲ್ಲಿ ಕಳೆದ ವಿಸ್ತರಣೆಗೊಂಡವುಗಳೇ ಹೆಚ್ಚಾಗಿವೆ. ಗವಿಮಠದ ಕಟ್ಟಡಗಳನ್ನು ಕೂಲಂಕಷವಾಗಿ ವಾಸ್ತುಶಿಲ್ಪ ದೃಷ್ಟಿಕೋನದಲ್ಲಿ ಪರಿಶೀಲಿಸಿದಾಗ ಕಲ್ಯಾಣ ಚಾಲುಕ್ಯರ ಕಾಲದಲ್ಲಿದ್ದ ಒಂದು ದೇಗುಲ ಕಟ್ಟಡವಿದೆ. ಇದರ ಜೊತೆಗೆ ನಂತರ ಕಾಲದಲ್ಲಿ ಕಟ್ಟಲಾದ ಸಾಲುಮಂಟಪಗಳಲ್ಲಿ ಕಲ್ಯಾಣ ಚಾಲುಕ್ಯರ ಕಾಲದ ಕಂಬಗಳನ್ನು ಬೇರೆಡೆಯಿಂದ ತಂದು ನಿರ್ಮಿಸಲಾಗಿದೆ. ಅಲ್ಲದೆ ಗವಿಸಿದ್ಧೇಶ್ವರ ಪ್ರಮುಖ ಗದ್ದುಗೆಯ ಕಟ್ಟಡ ಮುಂಬದಿಯಲ್ಲು ಎರಡು ಕಂಬಗಳು ಇವೆ. ಇವುಗಳಿಂದ ಕಲ್ಯಾಣ ಚಾಲುಕ್ಯರ ಕಾಲದ ಹೊತ್ತಿಗೆ ಈ ಸ್ಥಳವು ಮುಖ್ಯ ಧಾರ್ಮಿಕ ತಾಣವಾಗಿದ್ದುದು ದೃಢವಾಗುತ್ತದೆ. ಈ ಮಠದ ನೈರುತ್ಯಕ್ಕೆ ಬೆಟ್ಟಕ್ಕೆ ಹೊಂದಿದಂತೆ ಅಮೃತೇಶ್ವರ ದೇಗುಲವಿದೆ. ಇದು ಕೂಡ ಕಲ್ಯಾಣ ಚಾಲುಕ್ಯ ಹಾಗೂ ಅದಕ್ಕೂ ಪೂರ್ವದಲ್ಲಿ ನಿರ್ಮಾಣಗೊಂಡ ಲಕ್ಷಣಗಳಿವೆ.

ಇಲ್ಲಿ ಮೂರು ಜೈನತೀರ್ಥಂಕರರ ಉಬ್ಬು ಶಿಲೆಗಳಿವೆ. ಇದರಿಂದ ಅಮೃತೇಶ್ವರ ದೇವಾಲಯವು ಇತ್ತೀಚೆಗೆ ಶೈವದೇಗುಲವಾಗಿರುವುದು ದೃಢವಾಗುತ್ತದೆ. ಅಲ್ಲದೆ ಈ ದೇಗುಲಕ್ಕೆ ಸೇರಿದ ಶಾಸನವು ಕ್ರಿ.ಶ. ೧೩೪೬ರ ವಿಜಯನಗರ ಅರಸ ಹರಿಹರನ ಕಾಲದ್ದು. ಇದು ಜೈನಧರ್ಮಕ್ಕೆ ಪ್ರೋತ್ಸಾಹ ನೀಡಿ ಸಿಂಹನಂದಿ ಆಚಾರ್ಯರಿಗೆ ನಿಷದಿಯನ್ನು ಹಾಕಿಸಿದ ವಿವರ ಹೊಂದಿದೆ. ಇವುಗಳಿಂದ ಗವಿಮಠದ ಪರಿಸರವು ಹಿಂದೆ ಜೈನ ನೆಲೆಯೆಂಬುದು ಸ್ಪಷ್ಟವಾಗುತ್ತದೆ. ಅಲ್ಲದೆ ಇದಕ್ಕೆ ಪೂರಕವಾಗಿ ಗವಿಮಠದ ನೆಲಗವಿಯ ಬಂಡೆಯಲ್ಲಿರುವ ಶಾಸನವು ಕ್ರಿ.ಶ. ೧೬-೧೭ನೆಯ ಶತಮಾನದ್ದಾಗಿದೆ. ಇದರಲ್ಲಿ ಹಂಪಯ್ಯನೆಂಬ ವ್ಯಕ್ತಿ ಗವಿಮಠದ ಗುಹೆಯ ಮುಂದಿನ ಭಾಗವನ್ನು ಕಟ್ಟಿಸಿಕೊಟ್ಟನೆಂದು ಹೇಳಿದೆ.[೩] ಈ ಶಾಸನದ ಲಿಪಿಗಳು ಕೂಡ ಪ್ರಾಚೀನದಲ್ಲಿ ಇದ್ದು ವಿಜಯನಗರೋತ್ತರ ಕಾಲಕ್ಕೆ ಸಂಬಂಧಿಸಿದೆ. ಇದರಿಂದ ಹಂಪಯ್ಯನು ಈ ಮಠದ ಮೂಲ ಕರ್ತೃಗಳಾದ ರುದ್ರಮುನಿ ಆಚಾರ್ಯರಿಗೆ ಕ್ರಿ.ಶ. ೧೬-೧೭ನೆಯ ಶತಮಾನದಲ್ಲಿ ಸ್ವಾಮಿಗಳು ನೆಲೆಗೊಂಡಿದ್ದ ಗವಿಯ ಮುಂದೆ ಕಟ್ಟಡವನ್ನು ಕಟ್ಟಿಸಿಕೊಟ್ಟಿರುವ ಸಾಧ್ಯತೆಯಿದೆ.

ಗವಿಯ ಎಡಬದಿಯಲ್ಲಿ ಈಗ ಸ್ವಾಮಿಗಳು ವಾಸಿಸುತ್ತಿರುವ ಕಟ್ಟಡವು ಹಿಂದೆ ದೇವಾಲಯವಾಗಿದ್ದಿತು. ಇದು ದೇಗುಲದ ಎಲ್ಲ ಲಕ್ಷಣಗಳನ್ನು ಒಳಗೊಂಡಿದೆ. ಇದು ಗರ್ಭಗುಡಿ ಅಂತರಾಳದ ಭಾಗಗಳನ್ನು ಹೊಂದಿದ್ದು ಮುಂಬದಿಯ ಸಭಾ ಮಂಟಪವನ್ನು ನಂತರ ಕಾಲದಲ್ಲಿ ಕಟ್ಟಲಾಗಿದೆ. ಈ ದೇಗುಲದ ಗರ್ಭಗುಡಿಯ ಮೇಲೆ ಶಿಖರವಿದ್ದಿತು. ಆದರೆ ಈಗ ಅದು ಭಗ್ನಗೊಂಡು ಅದರ ಲಕ್ಷಣಗಳು ಮಾತ್ರ ಉಳಿದಿವೆ. ಈ ದೇಗುಲದ ಬಾಗಿಲುವಾಡವು ಅರೆಗಂಬಗಳು ಅಡ್ಡಪಟ್ಟಿಕೆಗಳಿಂದ ಅಲಂಕೃತಗೊಂಡಿದೆ. ಲಲಾಟಬಿಂಬದಲ್ಲಿ ಶಿವಲಿಂಗವಿದೆ. ಇದನ್ನು ನಂತರದಲ್ಲಿ ರಚಿಸಿರುವ ಸಾಧ್ಯತೆಯಿದೆ. ಇದರ ಕಂಬಗಳು ಕೆಳಗಿನಿಂದ ಚಚ್ಚೌಕವಾಗಿದ್ದು ಮಧ್ಯದಲ್ಲಿ ಸುರುಳಿಯಾಗಿ ಬಿಳೆಯಾಕಾರದಲ್ಲಿ ಕಡೆಯಲಾಗಿದೆ. ಮೇಲೆ ವೃತ್ತಾಕಾರದ ಫಲಕ ಮತ್ತು ಬೋದಿಗೆಗಳಿವೆ. ಈ ದೇಗುಲದ ಮುಂದೆ ಕಟ್ಟಲಾದ ವಿಸ್ತಾರ ಮಂಪಟವು ಅಲ್ಲಿನ ಲಕ್ಷಣಗಳಿಂದ ವಿಜಯನಗರೋತ್ತರ ಕಾಲದಲ್ಲಿ ನಿರ್ಮಾಣವಾಗಿರುವುದರಲ್ಲಿ ಸಂಶಯವಿಲ್ಲ.[೪]

**ಕೊಪ್ಪಳದ ಗವಿಸಿದ್ದೇಶ್ವರ ಜಾತ್ರೆ:** ಕೊಪ್ಪಳ ಜಿಲ್ಲೆಯಲ್ಲಿ ಬರುವ ಮಠಗಳಲ್ಲಿ ಶ್ರೀ ಗವಿಸಿದ್ದೇಶ್ವರ ಮಠವು ಅತ್ಯಂತ ದೊಡ್ಡದಾಗಿದೆ. ಈ ಮಠವನ್ನು ಸಾಂಸ್ಕೃತಿಕವಾಗಿ ನೋಡಿದಾಗ ಸಂಪ್ರದಾಯದ

ಆಚರಣೆಗಳು ಜರುಗುತ್ತವೆ. ಅದರಲ್ಲಿ ಜಾತ್ರೆ ಒಂದು ವೈಶಿಷ್ಟ್ಯವಾಗಿದೆ. ಪ್ರಾಚೀನತೆಯಿಂದ ಹಿಡಿದು ಇಂದಿನವರೆಗೂ ಶ್ರೀ ಗವಿಸಿದ್ದೇಶ್ವರ ಸ್ಮರಣಾರ್ಥಕವಾಗಿ ವರ್ಷಕ್ಕೊಮ್ಮೆ ಜನೇವರಿ ತಿಂಗಳಲ್ಲಿ ಈ ಜಾತ್ರೆಯು ಅತ್ಯಂತ ಸಡಗರ ಸಂಭ್ರಮದಿಂದ ೨೦ ದಿನಗಳ ಕಾಲ ನಡೆಯುತ್ತದೆ. ರಥೋತ್ಸವ ದಿನದಂದು ಸರ್ವಧರ್ಮೀಯರು ಭಾಗವಹಿಸುವದಲ್ಲದೇ ಇತರ ಜಿಲ್ಲೆಗಳಿಂದ ಅನೇಕ ಜನರು ಭಾಗವಹಿಸುತ್ತಾರೆ. ಆ ದಿನದಂದು ಹಿಂದೂ ಮುಸ್ಲಿಮರು ಭೇದ ಭಾವ ಎನ್ನದೆ ತಮ್ಮ ಬೇಡಿಕೆಗಳನ್ನು ಈಡೇರಿಸಿಕೊಳ್ಳಲು ಹರಕೆಯನ್ನು ಸಲ್ಲಿಸುತ್ತಾರೆ. ಈ ಜಿಲ್ಲೆಯ ಸುತ್ತಮುತ್ತಲಿನ ಗ್ರಾಮದ ಜನರು ಹೊಲ, ತೋಟ, ಗದ್ದೆಗಳಲ್ಲಿ ಬೆಳೆದ ದವಸ ದಾನ್ಯಗಳನ್ನು ಮೆರವಣಿಗೆಯ ಮುಖಾಂತರ ಜಾನಪದ ಹಾಡುಗಳು, ಡೊಳ್ಳು ಕುಣಿತ, ದಿಗೀಪದ ಹಾಗೂ ಶ್ರೀ ಗವಿಸಿದ್ದೇಶ್ವರನ ಭಕ್ತಿ ಗೀತೆಗಳನ್ನು ಹಾಡುತ್ತ ಮಠಕ್ಕೆ ಬಂದು ಅರ್ಪಿಸುತ್ತಾರೆ.

ಅಂದು ಸಂಜೆ ಮಹಾ ರಥೋತ್ಸವ ವೈಭವ ಸಡಗರ ಸಂಭ್ರಮದಿಂದ ನಡೆಯುವ ಈ ಕಾರ್ಯಕ್ರಮ ಜಾತ್ರೆಯ ಪ್ರಧಾನ ಅಂಗ. ಸಂಸ್ಥಾನ ಮಠವಾಗಿರುವುದರಿಂದ ಇದಕ್ಕೆ ಸಂಬಂಧಪಟ್ಟ ಅನೇಕ ಗ್ರಾಮಗಳ ಭಕ್ತರು ಜಾತ್ರೆಗೆ ಸಂಬಂಧಿಸಿದ ಹಲವಾರು ಸೇವಾ ಕಾರ್ಯಗಳನ್ನು ಹಂಚಿಕೊಂಡಿರುತ್ತಾರೆ. ಭಜನೆ ಮೇಳ, ನಂದಿಧ್ವಜ, ಹಲಗೆ, ಡೊಳ್ಳು ಮೇಳಗಳಿರುತ್ತವೆ. ಉತ್ಸವ ಮೂರ್ತಿಯನ್ನು ದೊಡ್ಡ ತೇರಿನಲ್ಲಿಟ್ಟು ಪಾದಗಟ್ಟೆಯವರೆಗೆ ಎಳೆಯುತ್ತಾರೆ. ನೆರೆದ ಜನ ತೇರಿಗೆ ಬಾಳೆಹಣ್ಣು, ಉತ್ತತ್ತಿ, ಬೆಲ್ಲ ಎಸೆಯುತ್ತಾರೆ. ರಥದ ಗಾಲಿಗಳಿಗೆ ಕಾಯಿ ಒಡೆಯುತ್ತಾರೆ. ರಥೋತ್ಸವದ ನಂತರದ ಹಲವು ದಿನಗಳವರೆಗೆ ಜಾತ್ರೆಯಲ್ಲಿ ನೂರಾರು ಅಂಗಡಿಗಳು ತಮ್ಮ ವ್ಯಾಪಾರ ಮತ್ತು ವ್ಯವಹಾರಗಳನ್ನು ನಡೆಸಿಕೊಂಡಿರುತ್ತವೆ. ಫಳಾರದ ಅಂಗಡಿಗಳು, ಹೋಟೆಲ್, ತೆಂಗಿನಕಾಯಿ, ಸ್ಟೇಶನರಿ ಹಾಗೂ ಬೇಸಾಯದ ಉಪಕರಣಗಳು ಈ ಜಾತ್ರೆಯಲ್ಲಿ ಕಾಣಬಹುದಾಗಿದೆ. ನಾಟಕ, ಬಯಲಾಟ, ಡೊಳ್ಳು ಕುಣಿತ, ಜೋಕಾಲಿ ಪ್ರಾಚೀನ ನಾಣ್ಯಗಳ ಪ್ರದರ್ಶನ, ಏಡ್ಸ್ ಜಾಗೃತಿ ಕುರಿತು ಉಪನ್ಯಾಸ, ರೈತರ ಕೃಷಿ ಉತ್ಪಾದನೆಯ ಬಗ್ಗೆ ಮಾಹಿತಿ ತಿಳಿಸುವುದು ಮುಂತಾದ ಮನೋರಂಜನಾತ್ಮಕ ಅನೇಕ ಬಗೆಯ ಚಟುವಟಿಕೆಗಳು ನಡೆಯುತ್ತವೆ. ಮಧ್ಯ ಕರ್ನಾಟಕದ ಹೆಚ್ಚಿನ ಜಾತ್ರೆಗಳಲ್ಲಿ ಐತಿಹಾಸಿಕ ಘಟನೆಗಳನ್ನು ಜಾತ್ರೆಯ ವಿಧಿಯಾಚರಣೆಗಳ ಜೊತೆ ಸಮೀಕರಿಸಿ ಸಮರ್ಥಿಸುವುದು ಒಂದು ವಿಶೇಷ. ಈ ಲಕ್ಷಣ ಕೊಪ್ಪಳ ಜಿಲ್ಲೆಯಲ್ಲೂ ಕಂಡುಬರುತ್ತದೆ. ಈ ಮಠವು ಶೈಕ್ಷಣಿಕ ಹಾಗೂ ಸಾಮಾಜಿಕ ಕಾರ್ಯಗಳಲ್ಲಿ ತನ್ನದೇ ಆದ ಕೊಡುಗೆಯನ್ನು ಇಂದಿಗೂ ನೀಡುತ್ತಾ ಬಂದಿದೆ.

**ಪಾರ್ಶ್ವನಾಥ ತೀರ್ಥಂಕರ ಬಸದಿ :** ಸುಮಾರು ೮ ಅಡಿ ಎತ್ತರದ ವೇದಿಕೆಯಲ್ಲಿ ಮೂರು ಅಡಿ ಎತ್ತರದ ಅಧಿಷ್ಠಾನದ ಮೇಲೆ ಜಿನಾಲಯ ಬಸದಿ ಕಟ್ಟಲಾಗಿದೆ. ಇದು ಗರ್ಭಗುಡಿಗಳಿಂದ ಕೂಡಿದ ಜಿನಾಲಯವಾಗಿದೆ. ಐದು ಗರ್ಭಗುಡಿಗಳಲ್ಲಿ ಮುಂಭಾಗದ ಎಡಬದಿಯ ಗರ್ಭಗುಡಿಯು ಭಗ್ನಗೊಂಡಿದೆ. ಐದು ಅಂತರಾಳ ಮಾತ್ರ ಉಳಿದಿದೆ. ಜಿನಾಲಯದ ಮೂರು ಗರ್ಭಗುಡಿಗಳು ಪೂರ್ವಾಭಿಮುಖವಾಗಿದ್ದು ಒಂದೇ ಸಾಲಿನಲ್ಲಿವೆ. ಇವುಗಳ ಮಧ್ಯದ ಗರ್ಭಗುಡಿಯಲ್ಲಿ ಮೂರು ಅಡಿ ಎತ್ತರದ ಪಾರ್ಶ್ವನಾಥ

ತೀರ್ಥಂಕರ ಶಿಲ್ಪವಿದೆ. ಇದರ ಜೊತೆಗೆ ಎರಡು ತೀರ್ಥಂಕರರ ಶಿಲ್ಪಗಳು ಹಾಗೂ ಅಂತರಾಳದಲ್ಲಿ ಕಳೆದ ಇಪ್ಪತ್ತು ವರ್ಷಗಳ ಹಿಂದೆ ಪ್ರತಿಷ್ಠಾಪಿಸಿದ ಪದ್ಮಾವತಿಯ ಶಿಲ್ಪಗಳಿವೆ. ತೀರ್ಥಂಕರ ಶಿಲ್ಪದಲ್ಲಿ ಒಂದನ್ನು ಮಹಾವೀರನೆಂದು ಹೇಳಲಾಗಿದ್ದು ಇದು ಸಮಭಂಗಿಯಲ್ಲಿ ನಿಂತಿದೆ. ಮಹಾವೀರನ ಸುತ್ತ ಪ್ರಭಾವಳಿಯೋಪಾದಿಯಲ್ಲಿ ಇಪ್ಪತ್ನಾಲ್ಕು ಜನ ತೀರ್ಥಂಕರರ ಚಿಕ್ಕ ಉಬ್ಬು ಶಿಲ್ಪಗಳಿವೆ. ಇದರ ಅಂತರಾಳ ಮತ್ತು ಬಾಗಿಲುವಾಡುಗಳ ಇಕ್ಕೆಲ ಹಾಗೂ ಮೇಲ್ಭಾಗದಲ್ಲಿ ಮುಂಚಾಚಿದ ಪಟ್ಟಿಕೆಗಳಿವೆ. ಬಲಬದಿಯ ಗರ್ಭಗುಡಿಯಲ್ಲಿ ವೃಷಭನಾಥನ ಶಿಲ್ಪವಿದೆ.[೫] ಇದರ ಹಿಂದೆ ಶಾಂತಿನಾಥ ತೀರ್ಥಂಕರ ಶಿಲ್ಪವಿದ್ದು ಮೂರು ಅಡಿ ಎತ್ತರವಿದೆ. ಶಾಂತಿನಾಥ ಶಿಲ್ಪದ ಪ್ರಭಾವಳಿಯನ್ನೇ ಹೂ ಬಳ್ಳಿಗಳಿಂದ ರಚಿಸಲಾಗಿದೆ. ಇದರ ಗರ್ಭಗುಡಿ ಮತ್ತು ಅಂತರಾಳಗಳು, ಬಾಗಿಲುವಾಡುಗಳು, ಅರೆಗಂಬಗಳು ಮತ್ತು ಪದ್ಮಗಳ ಸಾಲುಗಳಿಂದ ಕೂಡಿದೆ.

ಎಡಬದಿಯ ಗರ್ಭಗುಡಿಯಲ್ಲಿ ಎರಡು ಅಡಿ ಎತ್ತರದ ಪಾರ್ಶ್ವನಾಥ ಮತ್ತು ಅದರ ಪಕ್ಕದಲ್ಲಿ ಮೂರು ಅಡಿ ಎತ್ತರದ ಇನ್ನೊಂದು ತೀರ್ಥಂಕರ ಶಿಲ್ಪವಿದೆ. ಈ ಶಿಲ್ಪದ ಕೆಳಭಾಗದಲ್ಲಿ ನಾಗಶಿಲ್ಪವಿದ್ದು ಕೈಗಳಲ್ಲಿ ಪದ್ಮ, ಪಾಶ, ಹಣ್ಣು ಹಿಡಿದು ಕುಳಿತ ಯಕ್ಷ ಯಕ್ಷಿಯಿರುವರು. ತೀರ್ಥಂಕರ ತಲೆಯ ಮೇಲಿನ ಮೂರು ಸರ್ಪವು ತನ್ನ ಏಳು ಹೆಡೆಯನ್ನು ಬಿಚ್ಚುಕೊಂಡಿದೆ. ಈ ಮೇಲಿನ ಮೂರು ಗರ್ಭಗುಡಿ ಮತ್ತು ಅಂತರಾಳಗಳಿಗೆ ಹೊಂದಿದಂತೆ ವಿಶಾಲವಾದ ಸಭಾಮಂಟಪವಿದೆ. ಇದರಲ್ಲಿ ಹನ್ನೆರಡು ಕಂಬಗಳಿವೆ. ಇವುಗಳನ್ನು ಚಚ್ಚೌಕ ಹದಿನಾರು ಎಂಟು ಮತ್ತು ಹದಿನಾರು ಮುಖಗಳಲ್ಲಿವೆ. ಮೇಲ್ಭಾಗದಲ್ಲಿ ವೃತ್ತಾಕಾರದ ಮುಚ್ಚಳ ಮತ್ತು ಚಚ್ಚೌಕವಾದ ಫಲಕ ಮತ್ತು ಬೋದಿಗೆ ಒಳಗೊಂಡಿದೆ. ಮೇಲ್ಛಾವಣಿಯ ಎಲ್ಲ ಅಂಕಣಗಳಲ್ಲಿ ಪದ್ಮವಿರುವ ಭುವನೇಶ್ವರಗಳಿವೆ. ಸಭಾಮಂಟಪದಿಂದ ಹೊರಗೆ ಬಂದರೆ ಇಕ್ಕೆಲಗಳಲ್ಲಿ ಕೂತು ವಿಶ್ರಮಿಸುವ ಕಕ್ಷಾಸನಗಳಿವೆ. ಈ ಗೋಡೆಯಲ್ಲಿ ಬೆಳಕಿನ ವ್ಯವಸ್ಥೆಗೆಂದು ಜಾಲಂಧ್ರಗಳನ್ನು ಜೋಡಿಸಲಾಗಿದೆ. ಸಭಾಮಂಟಪದ ಮುಂಬದಿಯಲ್ಲಿ ಮಹಾ ಮಂಟಪವಿದೆ. ಇದರ ಉತ್ತರ ಮತ್ತು ದಕ್ಷಿಣಕ್ಕೆ ಎರಡು ಗರ್ಭಗುಡಿಗಳಿವೆ. ದಕ್ಷಿಣದ ಗರ್ಭಗುಡಿಯಲ್ಲಿ ಯಾವುದೇ ಶಿಲ್ಪಗಳಿಲ್ಲ. ಗರ್ಭಗುಡಿಯ ಬಾಗಿಲುವಾಡವು ಅರೆಗಂಬಗಳು ಮತ್ತು ಮುಂಚಾಚಿದ ಪಟ್ಟಿಕೆಗಳಿಂದ ಅಲಂಕೃತವಾಗಿದೆ. ಉತ್ತರ ದಿಕ್ಕಿನ ಗರ್ಭಗುಡಿಯು ಹಾಳಾಗಿದ್ದು ತೆರೆದ ಅಂತರಾಳ ಮಾತ್ರ ಉಳಿದ ಭಾಗವನ್ನು ಗೋಡೆಯಿಂದ ಮುಚ್ಚಲಾಗಿದೆ.

ಮಹಾಮಂಟಪದ ಕಂಬಗಳು ಕಲ್ಯಾಣ ಚಾಲುಕ್ಯ ಶೈಲಿಯವು. ಭುವನೇಶ್ವರಿಯಲ್ಲಿ ಪದ್ಮದ ಅಲಂಕರಣೆಯಿದೆ. ಜಿನಾಲಯದ ಮುಖ್ಯ ಪ್ರವೇಶ ದ್ವಾರದ ಇಕ್ಕೆಲಗಳು, ಕೈಸಾಲೆಗಳು ಮತ್ತು ಜಾಲಂದ್ರಗಳಿವೆ. ದೇಗುಲದ ಅದಿಷ್ಠಾನವು ಉಪಾನ, ಜಗಲಿ, ತ್ರಿಪಟ್ಟಿ, ಕುಮುದ ಹಾಗೂ ಪದ್ಮಗಳಿಂದ ಕೂಡಿದೆ. ಗರ್ಭಗುಡಿಗಳ ಮೇಲೆ ಯಾವುದೇ ಶಿಖರ ಭಾಗಗಳಿರುವುದಿಲ್ಲ. ಜಿನಾಲಯದ ಒಳಭಾಗದ ಸಭಾಮಂಟಪದಲ್ಲಿ ಜಿನ ಶಾಸನವಿದೆ. ಕೊಪ್ಪಳದ ಕೋಟೆ ಗೋಡೆಗೆ ಸೇರಿಸಿ ಸುಮಾರು ನೂರಕ್ಕೂ ಹೆಚ್ಚು ನಿಷದಿ ಕಲ್ಲುಗಳು ದೊರೆತಿವೆ.[೬] ಇವು ಹಿಂದಿನ ಜೈನಧರ್ಮದ ಔನತ್ಯವನ್ನು ಸಾರುತ್ತವೆ.

೨. ಇರಕಲ್ಲಗಡ :

**ಕೋಟೆ :** ಕೊಪ್ಪಳ ತಾಲ್ಲೂಕಿನ ಪ್ರಮುಖವಾಗಿ ಸಾಂಸ್ಕೃತಿಕ ಪರಂಪರೆಯನ್ನು ಹೊಂದಿರುವ ಇರಕಲ್ಲಗಡ ಗ್ರಾಮವು ತನ್ನದೇ ಆದ ವಿಶಿಷ್ಟವಾದ ಚರಿತ್ರೆಯನ್ನು ಹೊಂದಿದೆ. ಸಾಮ್ರಾಜ್ಯದ ಉನ್ನತಿಗಾಗಿ ಹೋರಾಡಿದ ವೀರಾಧಿವೀರರ ಸಾಹಸಗಾಥೆಯ ಕಥೆಗಳನ್ನೊಳಗೊಂಡಿದೆ. ಕೋಟೆಯ ದ್ವಾರ ಬಾಗಿಲು ದಾಟಿ ಹೊರ ಬಂದರೆ ದೊಡ್ಡ ಕಲ್ಲು ಬಂಡೆಗಳ ರಾಶಿ ಕಾಣುತ್ತದೆ. ಅವುಗಳ ಮಧ್ಯದಲ್ಲಿಯೇ ಮೂರು ಅಡಿ ಎತ್ತರ ಎರಡು ಅಡಿ ಅಗಲವಿದ್ದು, ಕೈಯಲ್ಲಿ ಭರ್ಜಿ ಹಿಡಿದು ನಿಂತಿರುವ ವೀರಗಲ್ಲು ವಿಗ್ರಹವು ಇಂದಿಗೂ ನೋಡಬಹುದಾಗಿದೆ. ಅದಕ್ಕೆ ಸೋಮಲಿಂಗೇಶ್ವರನೆಂದು ದೇಸಾಯಿ ಮನೆತನದವರು ಈಗಲೂ ಪೂಜಿಸುತ್ತಾರೆ. ಹಾಗೆಯೇ ಎರಡು ಅಡಿ ಎತ್ತರ ಒಂದು ಅಡಿ ಅಗಲವಿದ್ದು ಕುಳಿತ ಭಂಗಿಯಲ್ಲಿರುವ 'ಸ್ತ್ರೀ'ವಿಗ್ರಹವೂ ಪಕ್ಕದಲ್ಲಿಯೇ ಇದೆ. ಅವಳ ಹೆಸರು ಚೌಡಿಮಲ್ಲಮ್ಮನೆಂಬ ವಾಡಿಕೆಯಿದೆ.

ಕೋಟೆಯನ್ನು ಬಿಟ್ಟು ಊರು ಹೊಕ್ಕರೆ ರಾಯಪ್ಪದೇಸಾಯಿ ಗುಡಿ ಸಿಗುತ್ತದೆ. ಗುಡಿಯ ಒಳಗಡೆ ಕೈಯಲ್ಲಿ ಭರ್ಜಿಡಾಲು ಹಿಡಿದು ಕುದುರೆಯ ಮೇಲೆ ಸವಾರಿ ಮಾಡುತ್ತಿರುವ ರಾಯಪ್ಪದೇಸಾಯಿ ಹಿಂದೆ ಚಾಮರ ಹಿಡಿದು ಸೇವಕ ಹೊರಟ ವೀರಗಲ್ಲು ಊರಿನ ದೇವರಾಯರ ಮನೆತನದವರಿಂದ ಪೂಜೆಗೆ ಅರ್ಹವಾಗಿದೆ. ಹೀಗೆ ಗೋಪುರ ಬಸವಣ್ಣ, ರುದ್ರಸ್ವಾಮಿ, ಮಾರುತಿ ದೇವಸ್ಥಾನಗಳು ಇವೆ. ಕೋಟೆಯ ಪಶ್ಚಿಮಕ್ಕೆ ದುರ್ಗಾಂಬಿಕಾ ದೇವಿ ಗುಡಿ ಬಿದ್ದು ನೆಲಸಮವಾಗಿದೆ. ಆದರೆ ದೀಪಸ್ತಂಭ ಜೀವಂತವಾಗಿ ರಾರಾಜಿಸುತ್ತಿದೆ. ಕುಮಾರರಾಮ ನೆಲಸಿದ್ದ ಕುಮ್ಮಟದುರ್ಗ ಕಲೆಗೆ ಹೆಸರಾದ ಕಿನ್ನಾಳ, ಐತಿಹಾಸಿಕ ಸ್ಥಳ ಕನಕಗಿರಿ ಕೊಪ್ಪಳದಂತಹ ಸ್ಥಳಗಳು ಅತಿ ಸಮೀಪದಲ್ಲಿವೆ.[೭] ಈ ಗ್ರಾಮವು ಅನೇಕ ಪ್ರಾಚೀನ ದೇವಾಲಯಗಳನ್ನು ಒಳಗೊಂಡಿದೆ. ಅವುಗಳಲ್ಲಿ ಪ್ರಮುಖವಾದುದು.

**ಗೋಪುರ ಬಸವೇಶ್ವರ ದೇವಾಲಯ :** ಈ ಗ್ರಾಮದ ಆಗ್ನೇಯಕ್ಕೆ ಪಾಳೆಯಗಾರ ಅವಧಿಯಲ್ಲಿ ನಿರ್ಮಿಸಲಾದ ಕೋಟೆ ಇದೆ. ಪೂರ್ವಕಾಲದ ದೇವಾಲಯಗಳು ಈ ಗ್ರಾಮದಲ್ಲಿವೆ. ಅವುಗಳಲ್ಲಿ ಗೋಪುರ ಬಸವೇಶ್ವರ ದೇವಾಲಯವನ್ನು ನೋಡಬಹುದಾಗಿದೆ. ಗರ್ಭಗುಡಿ ಮತ್ತು ಸಭಾಮಂಟಪಗಳಿರುವ ಈ ದೇವಾಲಯದ ಗರ್ಭಗುಡಿಯಲ್ಲಿ ಮೂರು ಅಡಿ ಎತ್ತರದ ನಂದಿಶಿಲ್ಪವಿದೆ. ನಂದಿಶಿಲ್ಪವನ್ನು ಕಪ್ಪು ಶಿಲೆಯಲ್ಲಿ ಕಡೆಯಲಾಗಿದೆ. ಗರ್ಭಗುಡಿಯ ಬಾಗಿಲುವಾಡುವನ್ನು ಹೂಬಳ್ಳಿಗಳು ಶೈವದ್ವಾರಪಾಲಕರು ಮತ್ತು ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಉಬ್ಬುಕೆತ್ತನೆಗಳನ್ನು ಖಂಡರಿಸಿರುವರು, ಸಭಾಮಂಟಪದಲ್ಲಿ ಆರು ಕಂಬಗಳಿವೆ. ಇವುಗಳಲ್ಲಿ ಮಧ್ಯದ ನಾಲ್ಕು ಕಂಬಗಳು ಆಕಾರದಲ್ಲಿ ಚಚ್ಚೌಕ ಅಷ್ಟ, ಹದಿನಾರು ಮತ್ತು ವೃತ್ತದ ಆಕಾರದಲ್ಲಿವೆ. ಕಂಬಗಳ ಮೇಲ್ಭಾಗದಲ್ಲಿ ಫಲಕ ಮತ್ತು ಬೋದಿಗೆಗಳಿವೆ. ಮುಂಬದಿಯ ಎರಡು ಕಂಬಗಳನ್ನು ಚಚ್ಚೌಕ ಅಷ್ಟಮುಖ ಹಾಗೂ ಕುಂಭಗಳ ಆಕಾರದಲ್ಲಿ ಕಡೆದಿರುವರು. ದೇಗುಲದ ಗರ್ಭಗುಡಿಯ ಮೇಲೆ ದ್ರಾವಿಡ ಮಾದರಿಯ ತ್ರಿತಲ ಶಿಖರವಿದೆ.[೮] ಇದನ್ನು ಇಟ್ಟಿಗೆ ಗಾರೆ ಮತ್ತು ಗಚ್ಚುಗಳನ್ನು ಬಳಸಿ ಕಟ್ಟಿರುವರು, ಅರೆಗಂಬಗಳು ಮುಂತಾದ ಅಲಂಕರಣೆಗಳಿಂದ ಕೂಡಿದೆ. ಗರ್ಭಗುಡಿಯ

ಬಾಗಿಲುವಾಡವು ಪದ್ಮಗಳ ಸಾಲು ಅರೆಗಂಬಗಳು ದ್ವೈವ ದ್ವಾರಪಾಲಕರು ಮತ್ತು ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪಗಳನ್ನು ಹೊಂದಿದೆ.

**೩. ಮಾದಿನೂರು :**

ಕೊಪ್ಪಳ ತಾಲ್ಲೂಕಿಗೆ ಸೇರಿದ ಈ ಗ್ರಾಮವು ಪ್ರಾಚೀನ ಕಾಲದಿಂದಲೂ ಪ್ರಸಿದ್ಧಿಯನ್ನು ಪಡೆದುಕೊಂಡಿದೆ. ಕಲ್ಯಾಣ ಚಾಲುಕ್ಯರ ಕಾಲದ ಹೊತ್ತಿಗೆ ಇದು ಮಹಾ ಅಗ್ರಹಾರವಾಗಿ ಬೆಳೆದಿದ್ದಿತು. ಶಾಸನಗಳಲ್ಲಿ ಈ ಗ್ರಾಮವನ್ನು ಮೋದನೂರು, ಮೋದಿತಗ್ರಾಮ ಎಂದು ಕರೆದಿರುವುದು ಶಾಸನಗಳಲ್ಲಿ ಉಲ್ಲೇಖಿಸಲ್ಪಟ್ಟಿದೆ. ಇಲ್ಲಿನ ಜನರು ಸಾಂಸ್ಕೃತಿಕ ಹಬ್ಬ ಜಾತ್ರೆ ಹಾಗೂ ಮೊಹರಂ ಉರುಸ್‌ಗಳನ್ನು ಆಚರಿಸುವ ರೂಢಿಯನ್ನು ಇಂದಿಗೂ ಮುಂದುವರೆಸಿಕೊಂಡು ಬಂದಿದ್ದಾರೆ. ಇಲ್ಲಿನ ಪ್ರಾಚೀನತೆಗೆ ಸಾಕ್ಷಿಯೆಂಬಂತೆ ಸ್ಮಾರಕಗಳು, ಶಾಸನಗಳು ಹಾಗೂ ದೇವಾಲಯಗಳನ್ನು ಹೊಂದಿದೆ. ಇಲ್ಲಿನ ಪ್ರಮುಖವಾದ ದೇವಾಲಯಗಳೆಂದರೆ ಸೋಮೇಶ್ವರ ದೇವಾಲಯ, ಹಾಗೂ ವೀರಭದ್ರ ದೇವಾಲಯ.

**ಸೋಮೇಶ್ವರ ದೇವಾಲಯ :** ಗರ್ಭಗುಡಿ ಅಂತರಾಳ ಮತ್ತು ತೆರೆದ ಸಭಾಮಂಟಪಗಳಿಂದ ಕೂಡಿದ ದೇವಾಲಯವಾಗಿದೆ. ಗರ್ಭಗುಡಿಯಲ್ಲಿ ಶಿವಲಿಂಗ ಮತ್ತು ಅಂತರಾಳದಲ್ಲಿ ನಂದಿಯ ಶಿಲ್ಪಗಳಿವೆ. ಗರ್ಭಗುಡಿಯ ಬಾಗಿಲುವಾಡವು ಸರಳ ಕೆತ್ತನೆಯಲ್ಲಿದೆ. ಲಲಾಟ ಬಿಂಬದಲ್ಲಿ ಗಜಲಕ್ಷ್ಮಿಯನ್ನು ನಿರ್ಮಿಸಲಾಗಿದೆ. ಶಿಲ್ಪಗಳನ್ನು ಕಪ್ಪುಶಿಲೆಯಲ್ಲಿ ಕಡೆದು ನಿರ್ಮಿಸಿ ನಯಗೊಳಿಸಿರುವರು. ಸಭಾಮಂಟಪದಲ್ಲಿ ಎರಡು ಕಂಬಗಳಿವೆ. ಇವು ಚಚ್ಚೌಕ ಅಷ್ಟಮುಖಿ ಮತ್ತು ವೃತ್ತಾಕಾರವಾಗಿವೆ. ಮೇಲ್ಭಾಗದಲ್ಲಿ ಫಲಕ ಮತ್ತು ಬೋದಿಗೆಗಳಿವೆ. ದೇವಾಲಯವು ಗ್ರಾಮದ ಹೊರಭಾಗದಲ್ಲಿರುವುದರಿಂದ ರಕ್ಷಣೆಯಿಲ್ಲದೆ ಕನಿಷ್ಠ ಸ್ಥಿತಿಗೆ ಬಂದಿದೆ. ಇದರ ಕಾಲ ಕ್ರಿ.ಶ. ೧೪೪೯, ಇದರಲ್ಲಿ ಇಳಹಾಳ ಜಿದ್ದಿ ಸೆಟ್ಟಿಯ ಮಗ ನಾಗಿಸೆಟ್ಟಿಯ ಮೊದೆಗನೂರ ಸೋಮನಾಥ ದೇವರ ಶಿವಾಲಯವನ್ನು ಜೀರ್ಣೋದ್ಧಾರಗೊಳಿಸಿ ತೋಟವನ್ನು ದಾನನೀಡಿದ ವಿವರವಿದೆ. ಇದರಿಂದ ಸೋಮೇಶ್ವರ ದೇವಾಲಯವನ್ನು ೧೪೪೯ರ ಮೊದಲೇ ನಿರ್ಮಾಣವಾಗಿ ಪುನಃ ಜೀರ್ಣೋದ್ಧಾರಗೊಂಡಿರುವುದು ಸ್ಪಷ್ಟವಾಗುತ್ತದೆ.[೯] ಇದಕ್ಕೆ ಪುಷ್ಟಿಯಾಗಿ ವೀರಭದ್ರ ದೇವಾಲಯದ ಶಾಸನವು ಕ್ರಿ.ಶ. ೬೭೩ರಲ್ಲಿ ಕೇಶವ ದೇವನೆಂಬ ಅಧಿಕಾರಿ ಸೊಮನಾಥ ದೇವರಿಗೆ ದಾನ ನೀಡಿದುದಾಗಿ ಹೇಳಿದೆ. ಶಾಸನದಲ್ಲಿ ಮಾದಿನೂರು ಗ್ರಾಮವನ್ನು ಮೊದೆಗನೂರ ಎಂದು ಹೆಸರಿಸಿದೆ.

**೪. ಹುಲಿಗಿ :**

ಕೊಪ್ಪಳ ತಾಲೂಕಿನ ಐತಿಹಾಸಿಕ ಹಾಗೂ ಸಾಂಸ್ಕೃತಿಕ ಹಿನ್ನೆಲೆಯನ್ನು ಹೊಂದಿರುವ ಹುಲಿಗಿ ಗ್ರಾಮವೂ ಕರ್ನಾಟಕದ ಚರಿತ್ರೆಯಲ್ಲಿ ಮಹತ್ವದ ಸ್ಥಾನವನ್ನು ಹೊಂದಿದೆ. ಇಲ್ಲಿಯ ಮುಖ್ಯ ದೇವಸ್ಥಾನವಾದ ಹುಲಿಗೆಮ್ಮನ ಕುರಿತಾಗಿ ಶಿಷ್ಟ ಪುರಾಣಗಳಲ್ಲಿ ಮತ್ತು ಜನಪದ ಪುರಾಣಗಳಲ್ಲಿ ವಿವರಗಳಿರುವುದನ್ನು ಗಮನಿಸಲಾಗಿದೆ. ಈ ಪುರಾಣಗಳು ಮೌಖಿಕ ರೂಪದಲ್ಲಿ ಉಳಿದುಕೊಂಡು ಬಂದಿವೆ. ಇವುಗಳನ್ನು ಉಳಿಸಿಕೊಂಡು ಬಂದವರು ಮುಖ್ಯವಾಗಿ ಚಲುವಾದಿಗಳು, ಮಾದಿಗರು,

ಕುರುಬರು ಮತ್ತು ಇತರೆ ಹಿಂದುಳಿದ ಸಮುದಾಯಕ್ಕೆ ಸೇರಿದ ಜನರು. ಇವರು ಚೌಡಿಕೆಯನ್ನು ನುಡಿಸುತ್ತಾ ಹುಲಿಗೆಮ್ಮನ ಕುರಿತಾದ ಹಾಡುಗಳನ್ನು ಹಾಡುತ್ತಾರೆ.

ಹುಲಿಗೆಮ್ಮನಿಗೆ ಸಂಬಂಧಿಸಿದಂತೆ ಲಭ್ಯವಿರುವ ಐತಿಹ್ಯವೊಂದರಲ್ಲಿ ನಾಗಜೋಗಿ ಮತ್ತು ಬಸವ ಜೋಗಿಯರ ಉಲ್ಲೇಖವಿದೆ. ಅವರಿಗೋಸ್ಕರ ಹುಲಿಗೆಮ್ಮ ಹುಲಗಿಯಲ್ಲಿ ನೆಲೆ ನಿಂತಳು ಎನ್ನಲಾಗಿದೆ. ಸದ್ಯ ಹುಲಿಗೆಮ್ಮನ ಗುಡಿಯಲ್ಲಿ ನಾಥ ಸಂಪ್ರದಾಯಕ್ಕೆ ಸೇರಿದ ಗುಡಿ ಇಲ್ಲದಿದ್ದರೂ ಸವದತ್ತಿಯ ಎಲ್ಲಮ್ಮನ ಗುಡಿ ಹಿಂದಿನ ಭಾಗದಲ್ಲಿ ಈಗಲೂ ನಾಥ ಸಂಪ್ರದಾಯಕ್ಕೆ ಸೇರಿದ ಒಂದು ಮಠವಿದೆ. ಶೈವಮತಗಳಲ್ಲಿ ಒಂದಾದ ನಾಥ ಪಂಥದವರು ಈ ಭಾಗದಲ್ಲಿ ಹೆಚ್ಚು ಹರಡಿಕೊಂಡಿರಬಹುದೆಂದು ಹೇಳಲಾಗಿದೆ.

**ಹುಲಿಗೆಮ್ಮ ದೇವಸ್ಥಾನ :** ಮುಖ್ಯದ್ವಾರವನ್ನು ಪ್ರವೇಶಿಸುತ್ತಿರುವಂತೆ ಬಲಬದಿಯಲ್ಲಿ ಪರಶುರಾಮನ ಗುಡಿಯಿಂದ ಸುಮಾರು ಮೂರು ಅಡಿ ಎತ್ತರದ ಈ ವಿಗ್ರಹವನ್ನು ಇತ್ತೀಚಿಗೆ ನಿರ್ಮಿಸಲಾಗಿದೆ. ಪರಶುರಾಮನು ಎಲ್ಲಮ್ಮನ ಮಗನೆಂಬ ನಂಬಿಕೆ ಇರುವುದರಿಂದ ಭಕ್ತರೆಲ್ಲ ಪರಶುರಾಮನಿಗೆ ಕೈ ಮುಗಿಯುತ್ತಾರೆ. ಮಾತಂಗಿಗುಡಿ ಮತ್ತು ಹುಲಿಗೆಮ್ಮನ ಗುಡಿಯ ನಡುವೆ ಪುಟ್ಟಕಲ್ಲೊಂದಿದ್ದು ಅದರ ಬುಡದಲ್ಲಿ ವೀರನೊಬ್ಬನ ಉಬ್ಬುಶಿಲ್ಪವಿದೆ. ಇದನ್ನು ಮೈಲಾರಲಿಂಗ ಎಂದು ಕರೆಯುತ್ತಾರೆ. ಈತ ಎಲ್ಲಮ್ಮನ ಅಣ್ಣನೆಂಬ ನಂಬಿಕೆ ಜನರಲ್ಲಿದೆ. ಮೈಲಾರಲಿಂಗನ ಪಕ್ಕದಲ್ಲಿ ಧ್ವಜಸ್ತಂಭವಿದೆ. ಅದರ ಪಕ್ಕದಲಿ ಗುಂಡೊದನ್ನು ಇರಿಸಲಾಗಿದೆ. ಆ ಕಲ್ಲಿಗೆ ಎಣ್ಣೆ ಹಾಕಿರುವುದರಿಂದ ಗುಂಡು ಚೆನ್ನಾಗಿರುತ್ತದೆ. ಭಕ್ತರು ಮನಸ್ಸಿನಲ್ಲಿ ಏನನ್ನಾದರೂ ನೆನಸಿಕೊಂಡು ಆ ಕಲ್ಲನ್ನು ಬಲದಿಂದ ಎಡಕ್ಕೆ ತಿರುಗಿಸುತ್ತಾರೆ, ಇಷ್ಟಾರ್ಥಗಳು ಈಡೇರುತ್ತವೆ ಎಂಬ ನಂಬಿಕೆಯಿದೆ. ಹುಲಿಗೆಮ್ಮನ ಗುಡಿಯು ಅತ್ಯಂತ ಸರಳವಾಗಿದ್ದು ಗರ್ಭಗುಡಿ, ಅಂತರಾಳ ಮತ್ತು ಸಭಾಮಂಟಪವನ್ನು ಹೊಂದಿದೆ. ಅಂತರಾಳದಲ್ಲಿ ಜನ ನಿಲ್ಲುವಷ್ಟು ಸ್ಥಳವಿದೆ. ಪೂರ್ವಕ್ಕೆ ಇನ್ನೊಂದು ಬಾಗಿಲು ಇದೆ. ದೇವಸ್ಥಾನದ ಪಶ್ಚಿಮಕ್ಕೆ ಈಗ ಆಡಳಿತ ಕಛೇರಿಯನ್ನು ಸ್ಥಾಪಿಸಲಾಗಿದೆ.

ಹುಲಿಗೆಮ್ಮನ ಗುಡಿಯಿಂದ ತುಂಗಭದ್ರಾ ನದಿಗೆ ಹೋಗುವ ಹಾದಿಯಲ್ಲಿ ಸುಮಾರು ೨೦೦ ಮೀ. ದೂರದಲ್ಲಿ ಎಡಬದಿಗೆ ಸುಂದರವಾದ ಸೋಮೇಶ್ವರ ದೇವಸ್ಥಾನವಿದೆ. ಗರ್ಭಗುಡಿ ಸಭಾಮಂಟಪಗಳನ್ನು ಒಳಗೊಂಡ ಈ ದೇವಾಲಯದ ಕಂಭ ಮತ್ತು ಗೋಡೆಗಳಲ್ಲಿ ಸುಂದರವಾದ ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ. ಗುಡಿಯಲ್ಲಿ ಕಲ್ಯಾಣ ಚಾಲುಕ್ಯರ ಕಾಲದ ಶಾಸನ ಇದೆ.[೧೦] ಈ ಗುಡಿಯ ಹತ್ತಿರವಿರುವ ಇನ್ನೊಂದು ಗುಡಿಯಲ್ಲಿ ಗಣಪತಿಯ ಭಗ್ನ ಪ್ರತಿಮೆಯಿದೆ. ಹುಲಿಗಿ ದೇವಸ್ಥಾನದ ಪ್ರಧಾನ ದ್ವಾರ ಮತ್ತು ಎರಡನೇ ದ್ವಾರದ ನಡುವೆ ಬೇವಿನಮರದ ಕೆಳಗೆ ಮುದ್ದಮ್ಮನ ವಿಗ್ರಹವಿದೆ. ಭಕ್ತರು ಮುದ್ದಮ್ಮನಿಗೆ ಕುರಿ ಬಲಿ ನೀಡಿ ಹರಕೆ ಸಲ್ಲಿಸುತ್ತಾರೆ.

ಹುಲಿಗಿ ಕ್ಷೇತ್ರಕಾರ್ಯಕ್ಕೆ ಹೋದಾಗ ಆ ದೇವಾಸ್ಥಾನದ ಪೂಜಾರಿಗಳಾದ ಮಾರ್ಕಂಡಪ್ಪ ಪೂಜಾರ ಯಲಶೆಟ್ಟಿಯವರು ಜಾತ್ರೆಯ ವಿವರಣೆಯನ್ನು ಈ ರೀತಿ ನೀಡಿದರು. ಈ ರಥೋತ್ಸವಕ್ಕೆ ಐದು ಲಕ್ಷಕ್ಕೂ

ಅಧಿಕ ಸಂಖ್ಯೆಯಲ್ಲಿ ಸರ್ವಧರ್ಮೀಯರು ಭಾಗವಹಿಸುತ್ತಾರೆ. ಸ್ಥೂಲವಾಗಿ ನೋಡಿದರೆ. ಹುಲಿಗಿ ಜಾತ್ರೆ ಮೇ ತಿಂಗಳಲ್ಲಿ ಒಟ್ಟು ೧೦ ದಿವಸಗಳ ಕಾಲ ನಡೆಯುತ್ತದೆ.

೧. ವೈಶಾಖ ಬಹುಳ ಪ್ರತಿ ಪದದಂದು ಹುಲಿಗೆಮ್ಮ ದೇವಿಗೆ ಕಂಕಣಾಭರಣ ತೊಡಿಸುವುದು.

೨. ವೈಶಾಖ ಬಹುಳ ಅಷ್ಟಮಿ ಸಾಯಂಕಾಲ ಏಳು ಗಂಟೆಗೆ ದೇವಿಯ ರಥೋತ್ಸವ ಜರುಗುವುದು.

೩. ವೈಶಾಖ ಬಹುಳ ನವಮಿ ರಥೋತ್ಸವದ ಎರಡನೆಯ ದಿನದಂದು ಎಂಟು ಗಂಟೆಗೆ ಅಕ್ಕಿ ಪಡಿ ರಥೋತ್ಸವ ಅದೇ ದಿನ ರಾತ್ರಿ ಒಂಭತ್ತು ಗಂಟೆಗೆ ಕೊಂಡದ ಪೂಜೆ ಜರುಗುತ್ತದೆ.

೪. ವೈಶಾಖ ಬಹುಳ ದಶಮಿ ಜಾತ್ರೆಯ ಮೂರನೆಯ ದಿನದಂದು ಪೂರ್ವಾಹ್ನ ಮೂರು ಇಪ್ಪತ್ತಕ್ಕೆ ಗಂಗಾಪೂಜೆ ಅದೇ ದಿನ ಸಾಯಂಕಾಲದಂದು ಪ್ರಸಾದ ಕಟ್ಟುವುದು.

೫. ಜಾತ್ರೆಯ ನಾಲ್ಕನೆಯ ದಿನದಂದು ಪಾಯಸ ನೀಡುವುದು.

೬. ಜಾತ್ರೆಯ ಐದನೆಯ ದಿನಕ್ಕೆ ವೈಶಾಖ ಬಹುಳ ದ್ವಾದಶಿ ಕೈಕೊಂಡ ನಡೆಯುತ್ತದೆ.

**ಜಾತ್ರೆಯ ಒಂದು ನೋಟ :** ಕಂಕಣ ಕಟ್ಟುವುದು ಅಗಿ ಹುಣ್ಣಿಮೆಯಂದು ನಡೆಯುತ್ತದೆ. ಇದನ್ನು ಜಾತ್ರೆಯ ಮೊದಲ ಹಂತ ಅಥವಾ ಆರಂಭ ಎಂದು ಜನರು ಭಾವಿಸುತ್ತಾರೆ. ಆ ದಿವಸ ಸಾಯಂಕಾಲದ ಹೊತ್ತಿಗೆ ದೇವಸ್ಥಾನದ ಎದುರಿನಲ್ಲಿ ಸುಮಾರು ಐದು ಲಕ್ಷಕ್ಕೂ ಅಧಿಕ ಜನರು ಸೇರುತ್ತಾರೆ. ಸಾವಿರಾರು ಜನ ಜೋಗಪ್ಪ-ಜೋಗಮ್ಮಂದಿರು ಸೇರಿರುತ್ತಾರೆ. ಅರ್ಚಕರು ಗುಡಿಯೊಳಗೆ ಬಂದು ಹುಲಿಗೆಮ್ಮ ದೇವಿಯನ್ನು ಸಿಂಗರಿಸಿ ಕೈಗೆ ಕಂಕಣವೊಂದನ್ನು ತೊಡಿಸುವುದರ ಮೂಲಕ ಉಧೋ-ಉಧೋ ಎಂದು ಘೋಷಿಸುತ್ತಾರೆ. ಕಂಕಣ ಕಟ್ಟಿದ ಎಂಟನೆಯ ದಿವಸಕ್ಕೆ ಸಾಯಂಕಾಲ ದೇವಿಯ ರಥೋತ್ಸವ ನಡೆಯುತ್ತದೆ. ಗಂಗಾಮತಸ್ಥರು ಪಲ್ಲಕ್ಕಿಗೆ ಹೆಗಲು ಕೊಡುತ್ತಾರೆ. ಗುಡಿಗೆ ಏಳು ಸುತ್ತು ಹಾಕಿ ಬರುತ್ತಾರೆ. ಅಂದು ಅತ್ಯಂತ ಸಂಭ್ರಮದಿಂದ ಜಾತ್ರೆಯು ನೆರವೇರುತ್ತದೆ. ಜನರು ಪಲ್ಲಕ್ಕಿಯತ್ತ ನಾಣ್ಯಗಳನ್ನು ಎಸೆಯುವುದು, ತೆಂಗಿನಕಾಯಿ ಒಡೆಯುವುದು, ಭಂಡಾರ ಹಚ್ಚುವುದು ನಡೆದಿರುತ್ತದೆ. ಪಲ್ಲಕ್ಕಿಯನ್ನು ಗುಡಿಯೊಳಗೆ ಕೊಂಡೊಯ್ಯುವುದರ ಮೂಲಕ ರಥೋತ್ಸವ ಮುಗಿಯುತ್ತದೆ.

ಸಾಮಾನ್ಯ ಜನರು ದೇವಿಯ ಸಾಕ್ಷಾತ್ಕಾರಕ್ಕಾಗಿ ಹುಲಿಗಿ ಕ್ಷೇತ್ರಕ್ಕೆ ಬರುತ್ತಾರೆ. ಆ ಕ್ಷೇತ್ರದಲ್ಲಿ ಹುಲಿಗೆಮ್ಮ ದೇವಿ ಇರುವುದರಿಂದಾಗಿ ಆ ಸ್ಥಳಕ್ಕೆ ವಿಶೇಷ ಪ್ರಾಶಸ್ತ್ಯ ನೀಡಲಾಗುತ್ತದೆ ಮತ್ತು ಜಾತ್ರೆಯ ದಿವಸ ಅಲ್ಲಿ ದೇವಿ ಇರುವುದರಿಂದಾಗಿ ಆ ಸ್ಥಳವನ್ನು ಮೈಲಿಗೆಯಾಗದಂತೆ ನೋಡಿಕೊಳ್ಳಲಾಗುತ್ತದೆ. ಹೀಗೆ "ಲಾಕಿಕದ ಜನರು ಅಲೌಕಿಕದ ದೈವ ಮತ್ತು ಆ ಲೌಕಿಕದ ದೈವವನ್ನೇ ಲೌಕಿಕದ ಜನರಿಗೆ ದರ್ಶನ ಮಾಡುವ ಜೋಗಪ್ಪ-ಜೋಗಮ್ಮ ಈ ಮೂರು ಶಕ್ತಿಗಳ ಸಮನ್ವಯದಲ್ಲಿ ಈ ದೈವದ ಆರಾಧನೆ ನಡೆಯುತ್ತದೆ."[೧೧] ಹುಲಿಗೆಮ್ಮನ ಭಕ್ತರಲ್ಲಿ ದೀಕ್ಷೆ ತೆಗೆದುಕೊಂಡವರು ಜೋಗಮ್ಮ-ಜೋಗಪ್ಪ ಆಗುತ್ತಾರೆ. ಇವರಲ್ಲಿ ಹೆಚ್ಚಿನವರು ಸಮಾಜದ ಕೆಳವರ್ಗದಿಂದ ಬಂದವರೇ ಆಗಿರುತ್ತಾರೆ. ಇಲ್ಲಿ ಹೆಣ್ಣು ಮಕ್ಕಳಿಗೆ

ಮುತ್ತು ಕಟ್ಟಿ ಹುಲಿಗೆಮ್ಮ ದೇವರ ಹೆಂಡತಿಯಾಗಿ ಮಾಡುವ ಕುತೂಹಲಕರ ಅಂಶವಿದೆ. ಇವರಲ್ಲಿ ಉಚ್ಚಜಾತಿಯ ಸ್ತ್ರೀಯರು ಗರತಿ ಮುತ್ತು ಕಟ್ಟುತ್ತಾರೆ. ಇವರು ಹಬ್ಬ-ಹುಣ್ಣಿಮೆಗಳಲ್ಲಿ ದೇವರ ಸೇವೆ ಮಾಡಿ ತೃಪ್ತರಾಗುತ್ತಾರೆ. ಅದೇ ಕೆಳಜಾತಿಯ ಸ್ತ್ರೀಯರು ದೇವದಾಸಿ ಆಗುತ್ತಾರೆ. ಈ ಹೆಣ್ಣು ಮಕ್ಕಳಿಗೆ ಲೌಕಿಕದ ಯಾವುದೇ ಪುರುಷನೊಂದಿಗೆ ವಿವಾಹ ಇರುವುದಿಲ್ಲ.

ಅಂತೆಯೇ ಎಷ್ಟೋ ಜನ ಪುರುಷರು ಈ ಹುಲಿಗೆಮ್ಮ ದೇವಿಯ ದೀಕ್ಷೆಯನ್ನು ತೊಟ್ಟಿದ್ದಾರೆ. ಅಂದರೆ ನಪುಂಸಕತ್ವವುಳ್ಳ ಅನೇಕ ಜನ ಪುರುಷರು ಸಹ ಮುತ್ತು ಕಟ್ಟಿಸಿಕೊಂಡು ದೇವಿಯ ಭಕ್ತರಾಗಿ ಜೋಗಪ್ಪಗಳಾಗಿ ಹುಲಿಗೆಮ್ಮನ ಹೆಸರಲ್ಲಿ ಬಿಕ್ಷಾಟನೆ ಮಾಡಿ ಬದುಕುತ್ತಾರೆ. ಸ್ತ್ರೀಯರನ್ನು ಜೋಗಿತಿಯರೆಂದು ಕರೆದರೆ, ಪುರುಷರನ್ನು ಜೋಗಪ್ಪಗಳೆಂದು ಕರೆಯುತ್ತಾರೆ. ಹರಕೆಗಳನ್ನು ಈಡೇರಿಸಿಕೊಳ್ಳಲು ಪ್ರಾಣಿ ಬಲಿ ಕೊಡುವುದು ಸರ್ವೇಸಾಮಾನ್ಯವಾಗಿದೆ. ಈ ಜಾತ್ರೆಯು ಅತ್ಯಂತ ವಿಭಿನ್ನ ಸಂಸ್ಕೃತಿಯಿಂದ ಕೂಡಿರುತ್ತದೆ. ಕರ್ನಾಟಕ, ತಮಿಳುನಾಡು, ಆಂಧ್ರಪ್ರದೇಶ, ಮಹಾರಾಷ್ಟ್ರಗಳಿಂದ ಜನರು ಬಂದು ಜಾತ್ರೆಯಲ್ಲಿ ಪಾಲ್ಗೊಂಡಿರುತ್ತಾರೆ. ಒಟ್ಟಿನಲ್ಲಿ ಹುಲಿಗಿ ಜಾತ್ರೆಯು ದಕ್ಷಿಣ ಭಾರತದಲ್ಲಿ ಅತ್ಯಂತ ಮಹತ್ವವನ್ನು ಪಡೆದುಕೊಂಡು ತನ್ನ ಪ್ರಾಮುಖ್ಯತೆಯನ್ನು ಇಂದಿಗೂ ಉಳಿಸಿಕೊಂಡು ಬಂದಿದೆ ಎಂದು ಹೇಳಬಹುದಾಗಿದೆ.

**೫. ಕುಮ್ಮಟದುರ್ಗ :**

ಕೊಪ್ಪಳ ತಾಲ್ಲೂಕಿನ ಪ್ರಮುಖ ಐತಿಹಾಸಿಕ ಸ್ಥಳಗಳಲ್ಲಿ ಕುಮ್ಮಟದುರ್ಗವೂ ಒಂದು. ಕುಮ್ಮಟದುರ್ಗವು ಕುಮಾರರಾಮನ ಹೆಗ್ಗಳಿಕೆಗೆ ಪಾತ್ರವಾಗಿದೆ. ಕನ್ನಡ ಕಾವ್ಯಗಳಲ್ಲಿ ನಿರೂಪಿಸಿರುವ ಪ್ರಕಾರ ಕುಮಾರರಾಮ ಮೊದಲ ಬಾರಿಗೆ ಕುಮ್ಮಟವನ್ನು ನೋಡಲು ಬಂದಾಗ ಅಲ್ಲಿ ಬಹುಸಂಖ್ಯೆಯಲ್ಲಿ ಜೈನರು ವಾಸವಾಗಿದ್ದರು. ಇಲ್ಲಿ ಜಿನಗಾರರ ಗುಡಿಗಳೆಂದು ಕರೆಸಿಕೊಳ್ಳುತ್ತಿರುವ ಜೈನರ ಪಾಳು ಬಸದಿಯು ಇದೆ. ಒಳಗೆ ಒಂದು ಜೈನ ಮೂರ್ತಿಯೂ ಇದೆ. ಇದನ್ನು ಹೊಯ್ಸಳ ವಿಷ್ಣುವರ್ಧನನು ಜಯಿಸಿದ ಬಗ್ಗೆ ದಾಖಲೆಗಳಿವೆ. ಕರ್ನಾಟಕದ ಚರಿತ್ರೆಯಲ್ಲಿ ಕುಮ್ಮಟದುರ್ಗಕ್ಕೆ ವಿಶಿಷ್ಟವಾದ ಸ್ಥಾನವಿದೆ. ಇಲ್ಲಿನ ಪ್ರಮುಖ ಐತಿಹಾಸಿಕ ದೇವಾಲಯಗಳೆಂದರೆ ಜೈನದೇವಾಲಯ, ರಾಮಸ್ವಾಮಿ ದೇವಾಲಯಗಳು ಮತ್ತು ಕುಮಾರರಾಮನ ಜಾತ್ರೆ ಮತ್ತು ಹಬ್ಬ, ಉತ್ಸವ ಮುಂತಾದ ಸಾಂಸ್ಕೃತಿಕ ಚಟುವಟಿಕೆಗಳು ಇಂದಿಗೂ ನೋಡಬಹುದಾಗಿದೆ.

**ಜೈನ ದೇವಾಲಯ :** ಜೈನ ದೇವಾಲಯದಲ್ಲಿ ಒಂದರ ಮಗ್ಗಲು ಒಂದರಂತೆ ಮೂರು ಗರ್ಭಗುಡಿಗಳು ಮತ್ತು ಇವುಗಳೆಲ್ಲವನ್ನು ಒಳಗೊಂಡ ಒಂದು ಸಭಾಮಂಟಪವಿದೆ. ಗರ್ಭಗುಡಿಗಳ ಪ್ರವೇಶದ್ವಾರದ ಲಲಾಟಬಿಂಬಗಳಲ್ಲಿ ತೀರ್ಥಂಕರರ ಚಿತ್ರಣಗಳಿವೆ. ಮಧ್ಯದ ಗರ್ಭಗುಡಿಯಲ್ಲಿ ತೀರ್ಥಂಕರನ ವಿಗ್ರಹವಿದೆ. ಇದರ ಪೀಠದಲ್ಲಿ ಸಿಂಹದ ಚಿತ್ರವಿದ್ದು, ಬದಿಯಲ್ಲಿ ಎರಡು ಸಿಂಹಗಳು ಮತ್ತು ಎರಡು ಮಕರಗಳನ್ನು ಕೆತ್ತಲಾಗಿದೆ. ಇಬ್ಬರು ಸ್ತ್ರೀಯರು ಚೌರಿಯನ್ನು ಬೀಸುತ್ತಿರುವರು ಹಾಗೂ ಶಿರ ಭಾಗದಲ್ಲಿ ಮೂರು ಕೊಡೆಗಳಿವೆ.[೨೨]

**ರಾಮಸ್ವಾಮಿ ದೇವಾಲಯ :** ರಾಮಸ್ವಾಮಿಯ ಗುಡಿಯಲ್ಲಿಯೇ ಕುಮಾರರಾಮನ ಜಾತ್ರೆ ನಡೆಯುವುದರಿಂದ ಈ ಗುಡಿಗೆ ವಿಶೇಷ ಮಹತ್ವವಿದೆ. ಈ ಬೆಟ್ಟದ ವಾಯುವ್ಯ ದಿಕ್ಕಿನಲ್ಲಿ ಆನೆ ತಾಣದಿಂದ ಸುಮಾರು ೪೦೦ ಮೀ ದೂರದಲ್ಲಿರುವ ಈ ದೇವಾಲಯದಲ್ಲಿ ಗರ್ಭಗುಡಿ ಮತ್ತು ಸಭಾಮಂಟಪಗಳಿವೆ. ಗರ್ಭಗುಡಿಯ ಪ್ರವೇಶ ದ್ವಾರವು ಸಾದಾ ಕೆತ್ತನೆಯಿಂದ ಕೂಡಿದ್ದು, ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಎರಡೂ ಬದಿಗೆ ವೈಷ್ಣವ ದ್ವಾರಪಾಲಕರ ಶಿಲ್ಪಗಳಿವೆ. ಗರ್ಭಗುಡಿಯೊಳಗೆ ಉದ್ದವಾದ ಕಲ್ಲಿನ ಪೀಠವೊಂದಿದ್ದು, ಅದರಲ್ಲಿ ವೃತ್ತಾಕಾರದ ೧೨ ಕಲ್ಲುಗುಂಡುಗಳಿವೆ. ಇವು ಕುಮಾರರಾಮ ಮತ್ತು ಇತರರ ಶಿರಗಳೆಂದು ಜನ ಭಾವಿಸುತ್ತಾರೆ. ಆ ವೀರರ ತಲೆಗಳೇ ಲಿಂಗಗಳಾಗಿ ಪರಿವರ್ತನೆ ಹೊಂದಿವೆಯೆಂದು ಜನರು ಹೇಳುತ್ತಾರೆ. ಸಭಾಮಂಟಪದ ಪ್ರವೇಶ ದ್ವಾರದ ಲಲಾಟಬಿಂಬದಲ್ಲಿ ಗಜಲಕ್ಷ್ಮಿಯಿದ್ದು, ಒಳಗೆ ಚೌಕಾಕಾರದ ನಾಲ್ಕು ಕಂಬಗಳಿವೆ. ಇವುಗಳ ಚೌಕಗಳಲ್ಲಿ ಆನೆ ಮತ್ತು ಕುದುರೆ ಸವಾರರು, ನೃತ್ಯಗಾರ್ತಿಯರು, ಬೇಟೆಗಾರರ ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ. ಶಂಖ ಚಕ್ರ, ಓಂ, ಚಂದ್ರ, ಮೀನು ಚಿತ್ರಣಗಳನ್ನು ಒರಟಾಗಿ ಬರೆಯಲಾಗಿದೆ. ಕಂಬದ ಮೇಲ್ತುದಿಯಲ್ಲಿ ಹೂವಿನ ದಳಗಳಿಂದ ಮಾಡಲ್ಪಟ್ಟ 'ಪುಷ್ಪ' ಬೋದಿಗೆಗಳಿವೆ. ಸಭಾಮಂಟಪಕ್ಕೆ ಪೂರ್ವ ಹಾಗೂ ಪಶ್ಚಿಮ ದಿಕ್ಕುಗಳಿಗೂ ಪ್ರವೇಶ ದ್ವಾರಗಳಿವೆ. ಸಭಾಮಂಟಪದ ಎತ್ತರಕ್ಕೆ ಕೈಮುಗಿದು ಅಡ್ಡಬಿದ್ದಿರುವ ಮಹಿಳೆಯ ಶಿಲ್ಪವೊಂದಿದ್ದು, ಅದನ್ನು 'ರತ್ನಾಜಿ' ಎಂದು ಜನ ಹೇಳುತ್ತಾರೆ. ಆಕೆಯ ದುಷ್ಕೃತ್ಯಗಳಿಗಾಗಿ ಆ ವಿಗ್ರಹಕ್ಕೆ ಮೆಟ್ಟಿಕೊಂಡು ಹೋಗಬೇಕೆಂದು ಭಾವಿಸುತ್ತಾರೆ. ಪಶ್ಚಿಮದ ಗೋಡೆಯಲ್ಲಿ ಶಿರವೊಂದೇ ಇರುವ ಚಿತ್ರವಿದೆ. ಅದಕ್ಕೆ ತಾಗಿಕೊಂಡಿರುವ ಉಬ್ಬುಗಲ್ಲಿನಲ್ಲಿ ಕುದುರೆಯ ಚಿತ್ರವಿದೆ. ಇದನ್ನು 'ಬೊಲ್ಲ' ಎಂದು ಜನ ಗುರುತಿಸುತ್ತಾರೆ. ಇಲ್ಲಿ ಬಾಲಕೃಷ್ಣ,ರುದ್ರಾಕ್ಷಿ ಮಾಲೆ ಹಾಗೂ ಕಿವಿಯೋಲೆಯನ್ನು ಧರಿಸಿ ಸಮಭಂಗಿಯಲ್ಲಿ ನಿಂತಿರುವ ವಿಗ್ರಹ. ಕೀರ್ತಿಮುಖ, ಗಂಡಭೇರುಂಡ, ಮತ್ಸ್ಯಕನ್ಯೆಯರ ಶಿಲ್ಪಗಳಿವೆ. ದೇವಾಲಯವನ್ನು ಕಣಶಿಲೆ ಮತ್ತು ಇಟ್ಟಿಗೆ-ಗಾರೆಯಿಂದ ನಿರ್ಮಿಸಲಾಗಿದೆ[೮]. ಈ ಪ್ರದೇಶದಲ್ಲಿ ಚಿಕ್ಕ ಗರ್ಭಗುಡಿಗಳನ್ನು ಮಾತ್ರ ಹೊಂದಿರುವ ಪಕ್ರಾಣಿ, ಬೊಲ್ಲ, ಬೈಚಪ್ಪ, ಕಾಚಪ್ಪ ಮತ್ತು ಹನುಮಂತನ ದೇವಾಲಯಗಳಿವೆ. ಬೈಚಪ್ಪ ಕಂಪಿಲ ರಾಜನ ಚಾಣಾಕ್ಷ ಮಂತ್ರಿ, ಕಾಚಪ್ಪ ಕುಮಾರರಾಮನ ಸ್ನೇಹಿತರಲ್ಲೊಬ್ಬ. ಇತರರ ಹೆಸರಲ್ಲಿ ದೇವಾಲಯ ಕಟ್ಟಿಸಿರುವುದು ವಿಶೇಷವಾಗಿದೆ.

**೬. ಬಹದ್ದೂರ್ ಬಂಡಿ :**

**ಈಶ್ವರ ದೇವಾಲಯ :** ಕೊಪ್ಪಳದಿಂದ ದಕ್ಷಿಣಕ್ಕೆ ಮೂರು ಕಿ.ಮೀ. ದೂರದಲ್ಲಿರುವ ಬಹದ್ದೂರ್ ಬಂಡಿಯಲ್ಲಿ ಪ್ರಸಿದ್ಧ ಕೋಟೆಯಿದೆ. ಇಲ್ಲಿನ ಕೋಟೆಯಿಂದ ಈ ಗ್ರಾಮಕ್ಕೆ ಬಹುದ್ದೂರ್ ಬಂಡಿ ಎಂದು ನಾಮಕರಣವಾಗಿದೆ ಎಂದು ಆಧಾರಗಳು ತಿಳಿಸುತ್ತವೆ. ಹೈದಾರಾಲಿಯ ಕಾಲದಲ್ಲಿ ಮಹಮ್ಮದ್ ಉಸ್ಮಾನ್ ಕೋವಾರ್ ಎಂಬ ಅಧಿಕಾರಿಯು ಈ ಕೋಟೆಯನ್ನು ನಿರ್ಮಿಸಿದನೆಂದು ತಿಳಿದುಬರುತ್ತದೆ. ಭೂ ಮಟ್ಟದಲ್ಲಿರುವ ಈ ದೇವಾಲಯವು ಗರ್ಭಗುಡಿ ಮತ್ತು ಸಭಾಮಂಟಪಗಳನ್ನು ಒಳಗೊಂಡಿದೆ. ಗರ್ಭಗುಡಿಯಲ್ಲಿ ಇತ್ತೀಚೆಗೆ ಪ್ರತಿಷ್ಠಾಪಿಸಲಾದ ಒಂದು ಅಡಿ ಎತ್ತರದ ಶಿವಲಿಂಗವಿದೆ. ಗರ್ಭಗುಡಿಯ

ಬಾಗಿಲುವಾಡವು ಅರೆಗಂಬ, ಹೂವುಗಳಿಂದ ಅಲಂಕೃತವಾಗಿದೆ. ಲಲಾಟ ಬಿಂಬದಲ್ಲಿ ಗಜಲಕ್ಷ್ಮಿ ಮತ್ತು ಇಕ್ಕೆಲಗಳಲ್ಲಿ ತ್ರಿಶೂಲ, ಡಮರು ಮತ್ತು ಗದೆಗಳನ್ನು ಹಿಡಿದು ನಿಂತ ದ್ವಾರಪಾಲಕರ ಉಬ್ಬುಗೆತ್ತನೆಗಳೂ ಇವೆ.

ಸಭಾಮಂಟಪದಲ್ಲಿ ನಾಲ್ಕು ಕಂಬಗಳಿವೆ. ಇವುಗಳಲ್ಲಿ ಮೊದಲ ಸಾಲಿನವು ಚಚ್ಚೌಕ ಮತ್ತು ವೃತ್ತಾಕಾರಗಳಲ್ಲಿವೆ. ಮೇಲೆ ವೃತ್ತಾಕಾರದ ಮುಚ್ಚಳ ಹಾಗೂ ಚಚ್ಚೌಕವಾದ ಫಲಕ ಮತ್ತು ಬೋದಿಗೆಗಳಿವೆ. ಎರಡನೆಯ ಸಾಲಿನ ಕಂಬಗಳು ಚಚ್ಚೌಕ ಮತ್ತು ಅಷ್ಟಮುಖಗಳಲ್ಲಿವೆ. ಈ ದೇವಾಲಯದ ಪಕ್ಕದಲ್ಲಿ ಪ್ರಾಚೀನ ಬಾವಿಯಿದೆ. ಇದು ಗ್ರಾಮದ ಜನರಿಗೆ ನೀರಿನ ಸೌಕರ್ಯವನ್ನು ಒದಗಿಸುತ್ತಿದ್ದ ಮುಖ್ಯ ಜೀವಸೆಲೆಯಾಗಿತ್ತು. ದೇಗುಲದ ಮುಂಭಾಗದಲ್ಲಿ ದೀಪಸ್ತಂಭವನ್ನು ನಿಲ್ಲಿಸಲಾಗಿದೆ.

**೭. ಆನೆಗೊಂದಿ :**

ತುಂಗಭದ್ರಾ ನದಿಯ ಎಡದಂಡೆ ಮೇಲಿರುವ ಆನೆಗೊಂದಿಯು ವಿಜಯನಗರ ಆರಂಭದ ಕಾಲದಲ್ಲಿ ಪ್ರಮುಖ ಸ್ಥಳವಾಗಿತ್ತು. ಅಂತೆಯೇ ನ್ಯೂನಿಜ್ ಆನೆಗೊಂದಿಯನ್ನು ವಿಜಯನಗರದ ಮಾತೃಸ್ಥಾನವೆಂದು ಹೇಳಿದ್ದಾನೆ. ವಿಜಯನಗರದ ಅರಸರು ಇಲ್ಲಿ ಆನೆಗಳನ್ನು ಕಟ್ಟುತ್ತಿದ್ದರಿಂದ ಇದಕ್ಕೆ ಆನೆಗೊಂದಿ ಎಂಬ ಹೆಸರು ಬಂತೆಂದು ಹೇಳಲಾಗಿದೆ. ಶಾಸನಗಳಲ್ಲಿ ಇದನ್ನು 'ಕುಂಜರಕೋಣ ಹಸ್ತಿನಾವತಿ' ಎಂದು ಕರೆಯಲಾಗಿದೆ.[೧೫]

ಈ ಸ್ಥಳವು ಕೇವಲ ಐತಿಹಾಸಿಕ ಮಹತ್ವವನ್ನು ಪಡೆದುಕೊಂಡಿದ್ದಲ್ಲದೆ ಸಾಂಸ್ಕೃತಿಕ ಚಟುವಟಿಕೆಯಲ್ಲಿ ವೈಶಿಷ್ಟ್ಯತೆಯನ್ನು ಪಡೆದುಕೊಂಡಿದೆ. ರಂಗನಾಥ ದೇವಾಲಯದ ಸ್ಮರಣಾರ್ಥವಾಗಿ ಜಾತ್ರೆಯು ಸಾವಿರಾರು ಜನರ ಸಮ್ಮುಖದಲ್ಲಿ ಚೈತ್ರ ಕೃಷ್ಣಪಕ್ಷದ ಪಂಚಮಿಯಿಂದ ನವಮಿಯವರಿಗೆ ನಡೆಯುತ್ತದೆ. ಆನೆಗೊಂದಿ ಉತ್ಸವ ವಿಜಯದಶಮಿ ದಿವಸ ಕುದುರೆ ಉತ್ಸವ, ಮೂರು ವರ್ಷಕ್ಕೊಮ್ಮೆ ಊರಮ್ಮ (ಗ್ರಾಮದೇವಿ) ನ ಜಾತ್ರೆ ನಡೆಯುತ್ತದೆ. ಈ ಜಾತ್ರೆಯನ್ನು ಮಾಡದಿದ್ದರೆ ಇಲ್ಲಿ ಸಮಸ್ಯೆಗಳು ಎದುರಾಗುತ್ತವೆ ಎಂಬುದು ಜನರ ಅಭಿಮತ. ನಾಯಕ ಜನಾಂಗದವರು ಈ ಜಾತ್ರೆಯಲ್ಲಿ ಬಲಿಕೊಡುವುದು ಸಹಜವಾಗಿದೆ. ಈ ಜಾತ್ರೆಯಲ್ಲಿ ಮೂರು ದಿನಗಳ ಕಾಲ ಎಲ್ಲ ಧರ್ಮೀಯರೂ ಭಾಗವಹಿಸುತ್ತಾರೆ. ಮೊಹರಂ ಹಬ್ಬವು ಸಹ ಸಾಂಸ್ಕೃತಿಕ ಸೌಹಾರ್ದತೆಯ ಒಂದು ವೈಶಿಷ್ಟ್ಯವಾಗಿದ್ದು ಹದಿನೈದು ಸಾವಿರಕ್ಕೂ ಅಧಿಕ ಜನರು ಭಾಗವಹಿಸಿ ವಿಜೃಂಭಣೆಯಿಂದ ನಡೆಸಿಕೊಂಡು ಬರುತ್ತಿದ್ದಾರೆ.

**ಆನೆಗೊಂದಿ ಕೋಟೆ :** ಆನೆಗೊಂದಿ ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲ್ಲೂಕಿನ ನೈರುತ್ಯಕ್ಕೆ ೧೧ ಕಿ.ಮೀ. ದೂರದಲ್ಲಿ ತುಂಗಭದ್ರಾ ನದಿಯ ಎಡದಂಡೆಯ ಮೇಲಿದೆ. ಇದರ ಸಮೀಪದಲ್ಲಿ ನದಿಯ ಬಲದಂಡೆಯ ಮೇಲೆ ಹಂಪಿ ಇದೆ. ಆನೆಗೊಂದಿಯು ಐತಿಹಾಸಿಕ ಮಹತ್ವವುಳ್ಳ ಸ್ಥಳವಾಗಿದೆ.

ಆನೆಗೊಂದಿಯು ಉತ್ತರ ದಕ್ಷಿಣ ಮತ್ತು ಪಶ್ಚಿಮ ದಿಕ್ಕುಗಳಲ್ಲಿ ಬೆಟ್ಟದಿಂದ, ಪೂರ್ವ ಮತ್ತು ದಕ್ಷಿಣಗಳಲ್ಲಿ ನದಿಯಿಂದ ಸುತ್ತುವರಿದು ನೈಸರ್ಗಿಕವಾಗಿ ಸುರಕ್ಷಿತವಾದ ಸ್ಥಳವಾಗಿದೆ. ಇಲ್ಲಿ ಐತಿಹಾಸಿಕ ಕೋಟೆ ಕಟ್ಟಲಾಗಿದೆ. ಕೋಟೆಯನ್ನು ನೆಲದ ಮೇಲೆ ಮತ್ತು ಬೆಟ್ಟದ ಮೇಲೆ ನಿರ್ಮಿಸಲಾಗಿದೆ. ಈಗಿರುವ

ಅವಶೇಷಗಳನ್ನು ಗಮನಿಸಿದರೆ ಕೋಟೆಯ ನಿರ್ಮಾಣ ಕಾಕತೀಯರ ಕಾಲದಲ್ಲಿ (೧೩ನೆಯ ಶತಮಾನದಲ್ಲಿ) ಪ್ರಾರಂಭವಾಗಿ ೧೮ನೆಯ ಶತಮಾನದವರೆಗೆ ಮುಂದುವರೆದಿದೆ. ಕೋಟೆಗೋಡೆಯನ್ನು ವಿವಿಧ ಶೈಲಿಯಲ್ಲಿ ಕಟ್ಟಲಾಗಿದೆ. ಮೊದಲನೆಯ ಶೈಲಿಯ ಗೋಡೆಯನ್ನು ಆಯತಾಕಾರದ ದಪ್ಪ ಕಲ್ಲುಗಳಿಂದ ಒಂದು ಮತ್ತೊಂದಕ್ಕೆ ಸಂದಿ ಬಿಡದ ಹಾಗೆ ತಾಗುವಂತೆ ಕಟ್ಟಿದೆ. ಕಲ್ಲುಗಳ ಹಿಂಭಾಗ ಬೆಣೆಯಾಕಾರದಲ್ಲಿ ಚೂಪಾಗಿದೆ. ಈ ಗೋಡೆ ವಿಜಯನಗರ ಆರಂಭ ಕಾಲದ್ದು. ಎರಡನೆಯ ಶೈಲಿಯ ಗೋಡೆಯನ್ನು ಅಂತಹುದೇ ಕಲ್ಲುಗಳಿಂದ ಕಟ್ಟಿದ್ದರೂ ಕಲ್ಲುಗಳ ಮಧ್ಯದಲ್ಲಿ ಸಂದಿಗಳಿವೆ. ಈ ಸಂದಿಗಳಲ್ಲಿ ಕಲ್ಲಿನ ಚಕ್ಕೆಗಳನ್ನು ಸೇರಿಸಿದೆ, ಇದು ವಿಜಯನಗರ ಉಚ್ಛ್ರಾಯ ಕಾಲದ್ದಾಗಿದೆ. ಮೂರನೆಯ ಗೋಡೆಯನ್ನು ಚಿಕ್ಕಕಲ್ಲು ಮತ್ತು ಮಣ್ಣಿನಿಂದ ಕಟ್ಟಿದೆ. ಇದರಲ್ಲಿ ಕಲ್ಲಿನ ಚಕ್ಕೆಗಳನ್ನು ಹೆಚ್ಚಿಗೆ ಉಪಯೋಗಿಸಲಾಗಿದೆ.[೧೬] ಇದು ವಿಜಯನಗರದ ಪತನದ ನಂತರದ ೧೬-೧೭ನೆಯ ಶತಮಾನದ್ದು. ನಾಲ್ಕನೆಯ ಶೈಲಿಯ ಗೋಡೆ ಬಹಳ ಚಿಕ್ಕಕಲ್ಲುಗಳಿಂದ ಕಟ್ಟಿರುವುದರಿಂದ ಇದು ಬಲಿಷ್ಟವಾಗಿಲ್ಲ. ಕೋಟೆಯ ದುರಸ್ತಿಗಾಗಿ ಮಾತ್ರ ಬಳಸಲಾದ ಈ ಶೈಲಿಯ ಗೋಡೆಯ ಕಾಲ ೧೮ನೆಯ ಶತಮಾನದ್ದು. ಅಧ್ಯಯನದ ದೃಷ್ಟಿಯಿಂದ ಕೋಟೆಯನ್ನು ಮೂರು ಭಾಗಗಳೆಂದು ವಿಂಗಡಿಸಲಾಗಿದೆ.

೧. ಊರು ಸುತ್ತಲಿನ ಕೋಟೆ ೨. ಬೆಟ್ಟದ ಮೇಲಿನ ಉತ್ತರಕೋಟೆ ೩. ಬೆಟ್ಟದ ಮೇಲಿನ ದಕ್ಷಿಣ ಕೋಟೆ.

ಇಲ್ಲಿನ ಕೋಟೆಯಂತೆ ಪ್ರಮುಖವಾಗಿ ಐತಿಹಾಸಿಕ ಅನೇಕ ದೇವಾಲಯಗಳನ್ನು ಹೊಂದಿದೆ. ಅವುಗಳೆಂದರೆ.

**ರಂಗನಾಥ ದೇವಾಲಯ :** ರಂಗನಾಥ ದೇವಾಲಯವು ಗರ್ಭಗುಡಿ, ಅಂತರಾಳ, ಸಭಾಮಂಟಪ ಮತ್ತು ಮಹಾಮಂಟಪಗಳಿಂದ ಕೂಡಿದ್ದು, ಇವುಗಳ ಪ್ರವೇಶದ್ವಾರಗಳು ಸಾದಾ ಕೆತ್ತನೆಯನ್ನು ಒಳಗೊಂಡಿವೆ. ಗರ್ಭಗುಡಿಯಲ್ಲಿ ಎತ್ತರದ ಪೀಠದ ಮೇಲೆ ಶಯನ ಭಂಗಿಯಲ್ಲಿರುವ ರಂಗನಾಥನ ತಲೆಯ ಮೇಲೆ ಸರ್ಪವಿದೆ. ಅಂತರಾಳದ ಪ್ರವೇಶದ ಎಡಬದಿಗೆ ಆಂಜನೇಯ ಮತ್ತು ಗರುಡ ಶಿಲ್ಪಗಳಿವೆ. ಸಭಾಮಂಟಪಕ್ಕೆ ಉತ್ತರದಲ್ಲಿ ಇನ್ನೊಂದು ಪ್ರವೇಶದ್ವಾರವಿದ್ದು ಮಧ್ಯದಲ್ಲಿ ನಾಲ್ಕು ಮೂಲೆ ಕಂಬಗಳು ಹಾಗೂ ಎಂಟು ಅರ್ಧಕಂಬಗಳಿವೆ. ಇವು ಕೆಳಗೆ ಚೌಕ, ಮಧ್ಯ ೧೬-೮-೧೬ ಭಾಗದ ಪಟ್ಟಿಕೆ ವೃತ್ತಾಕಾರದ ಕುಂಭ ಚೌಕಾಕಾರದ ಫಲಕ ಬೋದಿಗೆಗಳಿಂದ ಕೂಡಿವೆ. ಈ ಲಕ್ಷಣಗಳನ್ನು ಹೋಲುವ ಹನ್ನೆರಡು ಕಂಬಗಳು ಮಹಾಮಂಟಪದಲ್ಲಿವೆ. ಪ್ರವೇಶದಲ್ಲಿ ಎರಡು ಬದಿಗೆ ಆನೆಗಳಿವೆ.

ದೇವಾಲಯದ ಸುತ್ತಲೂ ಇರುವ ಪ್ರಾಕಾರದಲ್ಲಿ ವಿಶಿಷ್ಟ ಕಂಬಗಳಿಂದ ಕೂಡಿದ ಸಾಲು ಮಂಟಪಗಳಿವೆ. ಕಂಬಗಳ ಕೆಳಗೆ ಸಿಂಹವಿದ್ದು ಮೇಲ್ಭಾಗದಲ್ಲಿ ಉಪಕಂಬಗಳಿವೆ. ಎಡಭಾಗದ ಮಂಟಪವನ್ನು ದೇವಾಲಯವಾಗಿ ಪರಿವರ್ತಿಸಿ ಅದರಲ್ಲಿ ವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದೆ. ಪ್ರಾಕಾರಕ್ಕೆ ಪೂರ್ವ ಹಾಗೂ ದಕ್ಷಿಣಕ್ಕೆ ಮಹಾದ್ವಾರಗಳಿದ್ದು, ಇವು ಹಂಪಿಯ ದೇವಾಲಯಗಳಲ್ಲಿರುವ ಪ್ರವೇಶ ಗೋಪುರಗಳಂತಿವೆ. ಇವುಗಳ ಬದಿಗಳಲ್ಲಿ ಸಾಲು ಮಂಟಪಗಳಿವೆ. ಜೀರ್ಣೋದ್ಧಾರವಾಗಿರುವ ಈ

ದೇವಾಲಯದ ಮುಖ್ಯ ಪ್ರವೇಶಕ್ಕೆ ಶಂಖ, ಚಕ್ರ, ಗದೆ ಹಿಡಿದು ನಿಂತ ವೈಷ್ಣವ ದ್ವಾರಪಾಲಕರ ವಿಗ್ರಹವಿದೆ.[೧೭]

**ಜೈನ ಬಸದಿ :** ತ್ರಿಕೂಟಾಚಲವಾದ ಜೈನ ಬಸದಿಯು ಮೂರು ಗರ್ಭಗುಡಿಗಳು, ಅವುಗಳ ಮುಂದೆ ಅಂತರಾಳಗಳು, ವಿಶಾಲವಾದ ಸಭಾಮಂಟಪ ಹಾಗೂ ಮುಖ ಮಂಟಪಗಳಿಂದ ಕೂಡಿದ ಪೂರ್ವಕ್ಕೆ ಮುಖ ಮಾಡಿರುವ ಗರ್ಭಗುಡಿಯ ಪ್ರವೇಶದ ಲಲಾಟ ಬಿಂಬದಲ್ಲಿ ತೀರ್ಥಂಕರನ ಮೂರ್ತಿ ಇದೆ. ಪರಸ್ಪರ ಅಭಿಮುಖವಾಗಿರುವ ಎರಡು ಗರ್ಭಗುಡಿಗಳು ಸಭಾಮಂಟಪದಲ್ಲಿದ್ದು, ಇವುಗಳ ಪ್ರವೇಶ ದ್ವಾರಗಳು ಸಾದಾಕೆತ್ತನೆಯಿಂದ ಕೂಡಿದೆ. ಉತ್ತರದ ಗರ್ಭಗುಡಿ ಭಾಗಶಃ ಹಾಳಾಗಿದೆ. ನಾಲ್ಕು ಕಂಬಗಳು, ನಾಲ್ಕು ಮೂಲೆ ಕಂಬಗಳು, ಎಂಟು ಅರ್ಧ ಕಂಬಗಳು ಸಭಾಮಂಟಪದಲ್ಲಿದ್ದು, ಇವುಗಳ ಕೆಳಗೆ-ಮೇಲೆ ಚೌಕ, ಮಧ್ಯೆ ೮-೧೬-೮ ಭಾಗದ ಪಟ್ಟಿಕೆಗಳು, ವೃತ್ತಾಕಾರದ ಮುಚ್ಚಳ, ಚೌಕಾಕಾರದ ಫಲಕ ಹಾಗೂ ಬೋದಿಕೆಗಳನ್ನು ಹೊಂದಿವೆ. ಸಬಾಮಂಟಪದ ಪ್ರವೇಶಕ್ಕೆ ಪದ್ಮ, ಬಳಿಕ ಲಲಾಟಬಿಂಬದಲ್ಲಿ ತೀರ್ಥಂಕರನ ವಿಗ್ರಹ, ಅರ್ಧಕಂಬಗಳ, ಇಕ್ಕೆಲಗಳಲ್ಲಿ ಚೌಕಾಕಾರದ ಕಂಬಗಳಿದ್ದು ಅವುಗಳಲ್ಲಿ ಕುಂಭ ಪಂಜರಗಳಿವೆ. ಇಲ್ಲಿ ಎರಡು ಕಡೆ ಆನೆಗಳಿವೆ. ಕೆಳಗೆ ಚೌಕಾಕಾರದ ಮೇಲೆ ಹದಿನಾರು ಭಾಗದ ವೃತ್ತಾಕಾರದಲ್ಲಿರುವ ನಾಲ್ಕು ಕಂಬಗಳು ಮುಖ ಮಂಟಪದಲ್ಲಿವೆ. ಇದಕ್ಕೆ ಹೊಂದಿಕೊಂಡು ತಳಮಟ್ಟದಲ್ಲಿ ಕಕ್ಷಾಸನವಿದ್ದು, ಇದರಲ್ಲಿ ಹಂಸ, ಪದ್ಮ, ಬಳ್ಳಿ ಕಂಭಗಳನ್ನು ಕೆತ್ತಲಾಗಿದೆ. ಬಸದಿಯ ಸುತ್ತಲೂ ಸರಳ ಶೈಲಿಯ ಗೋಡೆ ವಿಮಾನ ಭಾಗದಲ್ಲಿ ಮುಂಚಾಚಿದ ಪಟ್ಟಿಕೆಗಳಿವೆ.[೧೮]

**೮. ಕನಕಗಿರಿ :**

ಕನಕಗಿರಿಯು ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲ್ಲೂಕಿನ ಪ್ರಮುಖ ಐತಿಹಾಸಿಕ ಸ್ಥಳಗಳಲ್ಲಿ ಒಂದು. ಈ ಸ್ಥಳವು ಪರಸಪ್ಪ ನಾಯಕ ಪಾಳೆಗಾರರ ಕೇಂದ್ರವಾದಂತೆ ಕನಕಾಚಲ ಪತಿಯ ಸುಕ್ಷೇತ್ರವೂ ಆಗಿದೆ. ಕನಕ ಎಂಬ ಹೆಸರಿನ ಮುನಿ ಇಲ್ಲಿ ತಪಗೈದು ಬಂಗಾರದ ಮಳೆ ತರಿಸಿದ ಕಾರಣ ಈ ಸ್ಥಳಕ್ಕೆ ಕನಕಗಿರಿ ಎಂಬ ಹೆಸರು ಬಂದಿತೆನ್ನುವುದು ಪ್ರಚಲಿತ ಕಥೆ. ಸ್ಕಂದ ಪುರಾಣ ಮತ್ತು ಕನಕಗಿರಿಯ ಶಿಲಾಶಾಸನದಲ್ಲಿ ಕನಕಗಿರಿಯನ್ನು ಸುವರ್ಣಗಿರಿ ಎಂದು ಕರೆಯಲಾಗಿದೆ. ಈ ಸ್ಥಳವೇ ಮೌರ್ಯರ ದಕ್ಷಿಣ ಪ್ರಾಂತದ ರಾಜಧಾನಿ ಸುವರ್ಣಗಿರಿ ಎಂಬುದು ಹಲವಾರು ವಿದ್ವಾಂಸರ ಅಭಿಪ್ರಾಯವಾಗಿದೆ. ಇಲ್ಲಿನ ಶಿಲ್ಪಕಲಾ ಸೌಂದರ್ಯ ಹಾಗೂ ಭೌಗೋಳಿಕ ಅಂದವನ್ನು ಕಂಡು ಜನಪದರಲ್ಲಿ ಉಳಿದಿರುವ ನಾಣ್ಣುಡಿ ಎಂದರೆ "ಕಣ್ಣಿದ್ದವರು ಕನಕಗಿರಿ ನೋಡಬೇಕು, ಕಾಲಿದ್ದವರು ಹಂಪಿ ನೋಡಬೇಕು" ಎಂಬ ನುಡಿಮುತ್ತು ಸಾಕ್ಷಿಯಾಗಿದೆ.

**ಕನಕಾಚಲ ಲಕ್ಷ್ಮೀನರಸಿಂಹ ದೇವಾಲಯ :** ಕನಕಗಿರಿಯು ಗಂಗಾವತಿಯಿಂದ ಉತ್ತರಕ್ಕೆ ೨೮ ಕಿ.ಮೀ ದೂರದಲ್ಲಿದ್ದು, ಪ್ರಮುಖ ಪ್ರೇಕ್ಷಣೀಯ ಸ್ಥಳವಾಗಿದೆ. ಈ ಪ್ರದೇಶದಲ್ಲಿ ಹಲವಾರು ಕಲಾಸ್ಮಾರಕಗಳು ಬಾವಿ, ಕೆರೆ, ಪುಷ್ಕರಣಿ ಕೋಟೆ ಇತ್ಯಾದಿ ಸೇರಿದಂತೆ ಪ್ರಸ್ತುತ ಸುಮಾರು ಮೂವತ್ತೈದು ಸ್ಮಾರಕಗಳು

ಇಲ್ಲಿ ದೊರೆಯುತ್ತವೆ. ಇವುಗಳಲ್ಲಿ ಕನಕಾಚಲ ದೇವಾಲಯವು ಅತ್ಯಂತ ಮಹತ್ವವನ್ನು ಪಡೆದ ಐತಿಹಾಸಿಕ ದೇವಾಲಯವಾಗಿದೆ.

ದೇವಾಲಯದಲ್ಲಿ ಗರ್ಭಗುಡಿ, ಅಂತರಾಳ, ಸಭಾಮಂಟಪ, ಮಹಾಮಂಟಪಗಳಿವೆ. ಗರ್ಭಗುಡಿಯಲ್ಲಿ ಲಕ್ಷ್ಮೀನರಸಿಂಹನ ಸಾಲಿಗ್ರಾಮವಿದ್ದು, ಇದಕ್ಕೆ ಲೋಹದ ಮುಖವಾಡ ಹಾಕಲಾಗಿದೆ. ಪ್ರವೇಶದ್ವಾರಕ್ಕೆ ನಯಗೊಳಿಸಿದ ಶಿಲೆಗಳಿವೆ. ಅಂತರಾಳದ ಪ್ರವೇಶದ ದ್ವಾರ ಬಂಧದ ಜಂತಿಯಲ್ಲಿ ಚಕ್ರ, ತ್ರಿನಾಮ, ಶಂಖಗಳ ಚಿಹ್ನೆಗಳಿವೆ. ಬಾಗಿಲಿಗೆ ತಾಮ್ರದ ಕವಚ ಹೊದಿಸಲಾಗಿದ್ದು, ಕೆಳಭಾಗದಲ್ಲಿ ಜಯ-ವಿಜಯ ಹಾಗೂ ಎಡಕ್ಕೆ ವಿಷ್ಣುವಿನ ಶಿಲ್ಪಗಳಿವೆ.[೧೯]

ಸಭಾಮಂಟಪದ ದ್ವಾರಬಂಧದ ಎರಡೂ ಬದಿಗೆ ದ್ವಾರಪಾಲಕರು, ಲಲಾಟಬಿಂಬದಲ್ಲಿ ಗಜಲಕ್ಷ್ಮಿ, ಪಾರ್ಶ್ವದಲ್ಲಿ ಸ್ತಂಭಶಾಖೆ, ಲತಾಶಾಖೆಗಳಿವೆ. ಮೇಲಿನ ಉತ್ತರಾಂಗ ಭಾಗದಲ್ಲಿ ಲಕ್ಷ್ಮಿನಾರಾಯಣ ಅಕ್ಕಪಕ್ಕದಲ್ಲಿ ನಾಯಕರ ಹಾಗೂ ಭಕ್ತರ ಗಾರೆಶಿಲ್ಪಗಳಿವೆ. ಸಭಾಮಂಟಪಕ್ಕೆ ಉತ್ತರ-ದಕ್ಷಿಣ ದಿಕ್ಕುಗಳಿಗೂ ಪ್ರವೇಶ ದ್ವಾರಗಳಿದ್ದು, ಉತ್ತರದ ಬಾಗಿಲಿನ ಲಲಾಟ ಬಿಂಬದಲ್ಲಿ ಲಕ್ಷ್ಮೀ ಇದ್ದರೆ, ದಕ್ಷಿಣದಲ್ಲಿ ಬಾಲಕೃಷ್ಣನ ಶಿಲ್ಪವಿದೆ. ಇದರ ಎರಡೂ ಬದಿಗೆ ವೈಷ್ಣವ ದ್ವಾರಪಾಲಕರಿದ್ದಾರೆ. ಮಧ್ಯದಲ್ಲಿ ಎತ್ತರದ ವೇದಿಕೆಯ ಮೇಲೆ ಕಾಂಡ, ಕುಂಭ, ತಾಡಿ, ಕಳಸ, ಇದಚೆ ಫಲಕಗಳನ್ನೊಳಗೊಂಡ ಕಂಬಗಳಿವೆ. ಇವುಗಳ ಕಾಂಡ ಭಾಗದಲ್ಲಿ ಮೇಲೆ ಕೆಳಗೆ, ಅಸಮವಾದ ಚೌಕ ಭಾಗಗಳಿದ್ದು, ಮಧ್ಯದಲ್ಲಿ ಅಷ್ಟಮುಖಗಳ ಅಡ್ಡಪಟ್ಟಿಕೆಗಳಿವೆ.

ದೇವಾಲಯದ ಅತ್ಯಂತ ವಿಶಾಲ ಆಕರ್ಷಕ ಭಾಗವೆಂದರೆ ಸಭಾಮಂಟಪದ ಮುಂದಿರುವ ತೆರೆದ ಮಹಾಮಂಟಪ. ಇದು ಸುಮಾರು ೫೪ ಅಡಿ ಉದ್ದ, ೩೬ ಅಡಿ ಅಗಲವಾಗಿದ್ದು, ಸ್ತಂಭಗಳಿಂದ ಕೂಡಿದೆ. ಇದರಲ್ಲಿ ಎರಡು ಬಗೆಯ ೪೦ ಕಂಬಗಳಿವೆ. ಕಾಂಡ ಭಾಗದಲ್ಲಿ ಮೂರು ಚಚ್ಚೌಕ ಭಾಗಗಳು, ಅವುಗಳ ನಡುವೆ ೮ ಮುಖಗಳ ಅಡ್ಡ ಪಟ್ಟಿಕೆಗಳನ್ನು ಹೊಂದಿರುವ ೨೪ ಕಂಬಗಳು ಅಧಿಷ್ಠಾನದ ಮೇಲೆ ಸುತ್ತಲೂ ಇವೆ. ಇವುಗಳ ಚೌಕ ಮುಖಗಳಲ್ಲಿ ಬಾಲಕೃಷ್ಣ, ಕಾಳಿಂಗ, ಮರ್ಧನಕೃಷ್ಣ ಇತ್ಯಾದಿ ಉಬ್ಬುಶಿಲ್ಪಗಳಿವೆ. ಮಧ್ಯದ ೧೬ ಕಂಬಗಳು ೨ ಭಾಗಗಳನ್ನು ಹೊಂದಿರುತ್ತವೆ. ಮೊದಲ ಭಾಗದಲ್ಲಿ ಕೆಳಗೆ, ಮೇಲೆ ಅಂಕೃತ ೬ ಸಮವಾದ ಚೌಕಭಾಗಗಳು, ಮಧ್ಯದಲ್ಲಿ ಚಚ್ಚೌಕ ಭಾಗವಿರುತ್ತದೆ. ಕೆಳಗಿನ ಹಾಗೂ ಮಧ್ಯದ ಭಾಗದಲ್ಲಿ ನಾಗಬಂಧ, ವಾದ್ಯಗಾರರು, ಗಜಾನನ, ಬೆಣ್ಣೆಕೃಷ್ಣ, ಗೋಪಾಲಕೃಷ್ಣ, ಬೇಡರಕಣ್ಣಪ್ಪ, ಭಕ್ತಾಂಜನೇಯ, ಲಕ್ಷ್ಮೀನರಸಿಂಹ, ಶಿವಲಿಂಗ ಪೂಜಿಸುತ್ತಿರುವ ಸರ್ಪ, ಗಂಡಭೇರುಂಡ ವಿಷ್ಣುವಿನ ದಶವತಾರ ಹಾಗೂ ಮಿಥುನ ಶಿಲ್ಪಗಳಿವೆ. ಇದಕ್ಕೆ ಹೊಂದಿಕೊಂಡ ಇನ್ನೊಂದು ಭಾಗದಲ್ಲಿ ಹಿಂದಿನ ಕಾಲಿನಲ್ಲಿ ಆನೆಯನ್ನು ತುಳಿಯುತ್ತಾ ಮುಂದಿನ ಕಾಲನ್ನು ಮೇಲಕ್ಕೆ ಎತ್ತಿ ನಿಂತ ಸಿಂಹಗಳಿವೆ. ಇವುಗಳ ಮೇಲೆ ಸವಾರರು ಕುಳಿತ್ತಿದ್ದಾರೆ.

ಮೇಲ್ಛಾವಣಿ ಮತ್ತು ಕಂಬಗಳ ನಡುವೆ ಇರುವ ಗೂಡುಗಳಲ್ಲಿ ರಾಮ, ಲಕ್ಷ್ಮಣ, ಸೀತೆ, ಹನುಮ, ರುಕ್ಮಿಣಿ ಸ್ವಯಂವರ, ಅನಂತಶಯನ, ಉಗ್ರಹನರಸಿಂಹ, ಮುರುಳಿಕೃಷ್ಣ, ವೃಷಭಾರೂಢ

ಉಮಾ ಮಹೇಶ್ವರ, ಗಿರಿಜಾ ಕಲ್ಯಾಣ, ಸೀತಾ ಕಲ್ಯಾಣ, ನಾಯಕರ ವರ್ಣಚಿತ್ರಗಳು ನೋಡುಗರ ಗಮನವನ್ನು ಸೆಳೆಯುತ್ತವೆ. ಗರ್ಭಗುಡಿಯ ಮೇಲೆ ವೇಸರ ಶೈಲಿಯ ಶಿಖರವಿದೆ. ದೇವಾಲಯದ ಸುತ್ತಲೂ ವಿಶಾಲವಾದ ಪ್ರಾಕಾರವಿದ್ದು ಇದರ ಒಳಗಡೆ ಸುತ್ತಲೂ ಕಂಬಗಳಿಂದ ಕೂಡಿದ ಮಂಟಪಗಳನ್ನು ನೋಡಬಹುದಾಗಿದೆ. ಇದರ ಬಲ ಹಾಗೂ ಎಡ ಭಾಗಗಳಲ್ಲಿ ದ್ವಾರಪಾಲಕರನ್ನೊಳಗೊಂಡಿರುವ ಬಾಗಿಲುಗಳಿವೆ. ಪೂರ್ವ ಮುಖ್ಯದ್ವಾರದ ಬಲ ಪ್ರಾಕಾರಕ್ಕೆ ಹೊಂದಿಕೊಂಡಿರುವ ಮಂಟಪವನ್ನು ಸಂಜೀವ ಮೂರ್ತಿಯ ವಿಗ್ರಹವಿದೆ. ಪ್ರಧಾನ ದ್ವಾರ ಮಂಟಪದ ಪೀಠ, ಕಾಂಡ, ತಾಡಿ, ಫಲಕ ಭಾಗಗಳಿಂದ ಕೂಡಿದ ನಾಲ್ಕು ಎತ್ತರದ ಕಂಬಗಳನ್ನು ಒಳಗೊಂಡಿದೆ. ಈ ಕಂಬಗಳ ಕಾಂಡ ಭಾಗದಲ್ಲಿ ೮-೧೬-೮ ಮುಖಗಳ ಅಡ್ಡ ಹಾಗೂ ಉದ್ದ ಪಟ್ಟಿಕೆಗಳಿವೆ. ದ್ವಾರದ ಎರಡೂ ಬದಿಗೆ ವೈಷ್ಣವ ದ್ವಾರಪಾಲಕರ ದೊಡ್ಡ ಗಾತ್ರದ ಶಿಲ್ಪಗಳಿವೆ. ಮೇಲ್ಛಾವಣಿಯ ಕೆಳಭಾಗದಲ್ಲಿ ಗಿರಿಧರ ಗೋಪಾಲ, ಸರಸ್ವತಿ, ಆದಿಶೇಷನ ಮೇಲೆ ಕುಳಿತ ವಿಷ್ಣು, ಗರುಡ, ಅನಂತಶಯನ, ಆಂಜನೇಯ, ಗೋಪಿಕೃಷ್ಣ, ಗಜಾನನ, ರಾಮ, ಸೀತೆ, ಲಕ್ಷ್ಮಣರ ಆಕರ್ಷಕವಾದ ಶಿಲ್ಪಗಳಿವೆ. ದ್ವಾರ ಮಂಟಪದ ಮೇಲೆ ಇಟ್ಟಿಗೆ ಗಾರೆಯಿಂದ ಕಟ್ಟಲಾದ ದ್ವಿತಲದ ಗೋಪುರವಿದೆ. ಇದರ ಕೆಳ ಹಂತದಲ್ಲಿ ದೇವಕೋಷ್ಠಗಳು, ಅವುಗಳ ಮೇಲೆ ಶಾಲ-ಕೂಟಗಳಿವೆ. ಗೋಪುರದ ಪ್ರತಿ ಬಾಗಿಲಿನ ಬದಿಗಳಲ್ಲಿ ದ್ವಾರಪಾಲಕ ಶಿಲ್ಪಗಳಿವೆ. ಮೇಲೆ ಶಾಲ ಶಿಖರವಿದೆ. ಪ್ರಾಕಾರದ ಎಡ, ಬಲಗಳಲ್ಲಿರುವ ದ್ವಾರಮಂಟಪಗಳ ಮೇಲೂ ಗೋಪುರಗಳಿವೆ. ಪ್ರಾಕಾರಕ್ಕೆ ಹೊಂದಿಕೊಂಡು ಒಳಭಾಗದಲ್ಲಿ ಕಂಬಗಳ ಮಂಟಪ, ಕಲ್ಯಾಣ ಮಂಟಪ, ಯಜ್ಞ ಮಂಟಪಗಳಿವೆ. ಇವುಗಳಲ್ಲಿ ಆಳ್ವಾರರು, ಆಂಜನೇಯ, ಮಹೇಶ್ವರ, ಬಾಲಕೃಷ್ಣ, ಬ್ರಹ್ಮ ಶಿಲ್ಪಗಳಿವೆ. ದೇವಾಲಯಕ್ಕೆ ಎದುರಾಗಿ ಕಟ್ಟೆಯ ಮೇಲೆ ೩೬ ಅಡಿ ಎತ್ತರದ ದ್ವೀಪಸ್ತಂಭವಿದೆ. ಹೀಗೆ ಹಲವಾರು ವೈಶಿಷ್ಟತೆ ಹಾಗೂ ಕಲಾಶೈಲಿಯ ಹೊಂದಿದ ಪ್ರಮುಖ ದೇವಾಲಯವಾಗಿದೆ.

**ಕನಕಗಿರಿ ಜಾತ್ರೆ :** ಶ್ರೀ ಕನಕಾಚಲ ಲಕ್ಷ್ಮೀನರಸಿಂಹ ದೇವಾಲಯದ ಸ್ಮರಣೆಗಾಗಿ ಪ್ರತಿವರ್ಷ ಫಾಲ್ಗುಣ ಮಾಸದಲ್ಲಿ (ಫೆಬ್ರವರಿ) ೧೩ ದಿನಗಳ ಕಾಲ ಜಾತ್ರೆ ಜರುಗುತ್ತದೆ. ಬಾಜಾ ಬಜಂತ್ರಿ ಸಹಿತ ದೇವರ ಪಾಲಕಿಯನ್ನು ಧ್ವಜದ ಕಟ್ಟೆಯ ಹತ್ತಿರ ತಂದು ಪೂಜೆ ಮಂಗಳಾರತಿ ಮಾಡಿ ಲಗ್ನ ಪತ್ರಿಕೆಯ ಪೂಜೆ, 'ಶ್ರೀ ಕನಕಾಚಲ ಲಕ್ಷ್ಮೀನರಸಿಂಹ ಪ್ರಸನ್ನ' ಎಂದು ತಾಡೋಲೆಗಳನ್ನು ಭಕ್ತಾದಿಗಳಿಗೆ ಹಂಚುತ್ತಾರೆ. ಮರುದಿನ ಧ್ವಜಾರೋಹಣ ಆಗುತ್ತದೆ. ಪೂಜಾರಿಗಳು, ಭಕ್ತರು ಕಂಕಣ ಕಟ್ಟಿಕೊಳ್ಳುತ್ತಾರೆ. ಇದನ್ನು ಕಂಕಣಧಾರಣ, ದೇವಯಾಗ ಪ್ರಾರಂಭ ಎಂದು ನಂಬಲಾಗಿದೆ. ಕಂಕಣ ಕಟ್ಟಿಕೊಂಡ ನಂತರ ಈ ಊರಿನ ವಾಲ್ಮೀಕಿ ಜನರು ಮನೆಯನ್ನು ಮಡಿಮಾಡಿ ಹೊಸ ಗಡಿಗೆಗಳನ್ನು ಬಳಸುತ್ತಾರೆ. ಕಡುಬಿನ ಕಾಳಗ ಆಗುವವರೆಗೂ ಮನೆಯಲ್ಲಿ ರೊಟ್ಟಿ ಸುಡುವುದಿಲ್ಲ.

ಮುಂದಿನ ಐದು ದಿನ ಕ್ರಮವಾಗಿ ಪುಷ್ಪ ಮಂಟಪಾರೋಹಣ, ಹಂಸಾರೋಹಣ, ಸಿಂಹಾರೋಹಣ, ಹನುಮಂತೋತ್ಸವ, ಶೇಷೋತ್ಸವಗಳು ನಡೆಯುತ್ತವೆ. ಇದರಲ್ಲಿ ಹಿಂದುಗಳು ಮುಸ್ಲಿಮರು ಇತರ ಧರ್ಮೀಯರು ಪಾಲ್ಗೊಳ್ಳುವುದು ಜಾತ್ರೆಯ ಒಂದು ವಿಶೇಷವಾಗಿದೆ. ಫಾಲ್ಗುಣ ಬಹುಳ ಪಂಚಮಿಯಂದು

ನಡೆಯುವ "ಗರುಡೋತ್ಸವ" ಈ ಎಲ್ಲ ಉತ್ಸವಗಳಲ್ಲಿ ಇದು ಅತ್ಯಂತ ಪ್ರಮುಖವಾದುದು. ಅಂದು ಸುತ್ತಮುತ್ತಲ ಗ್ರಾಮಗಳ ಜನ ಸಹಸ್ರಾರು ಸಂಖ್ಯೆಯಲ್ಲಿ ಪಾಲ್ಗೊಂಡಿರುತ್ತಾರೆ. ಸಪ್ತಮಿಯಂದು ಸಂಜೆ ರಥೋತ್ಸವ ದಿನದಂದು ಲಕ್ಷಕ್ಕೂ ಅಧಿಕ ಜನರು ಆಗಮಿಸುತ್ತಾರೆ. ರಥದ ಹತ್ತಿರ ಹೋಮಹವನ ಬಿಳಿ, ಕಪ್ಪು, ಕೆಂಪು ಅನ್ನವನ್ನು ಬಂಡಿಯಲ್ಲಿ ಹೇರಿಕೊಂಡು ಪೂಜಾರಿಗಳು ಊರಲ್ಲಿ ಎರಚುತ್ತಾ ಬರುತ್ತಾರೆ. ಇದನ್ನು ರಥಬಲಿಹರಣ ಎಂದು ಕರೆಯುತ್ತಾರೆ. ಇಲ್ಲಿ ಮಡಿತೇರಿನ ಪದ್ಧತಿ ಇಲ್ಲ. "ವೆಂಕಟರಮಣ ಗೋವಿಂದಾ ಗೋವಿಂದಾ" "ಕನಕಾಚಲಪತಿ ಗೋವಿಂದಾ ಗೋವಿಂದಾ" ಎಂದು ಹಾಡುತ್ತಾ ಭಕ್ತಾಧಿಗಳು ಹನುಮಪ್ಪನ ಗುಡಿವರೆಗೂ ರಥವನ್ನು ಹನುಮಪ್ಪನ ಸ್ವಸ್ಥಾನಕ್ಕೆ ಎಳೆದು ತರುತ್ತಾರೆ.[೨೦] ಜನರು ತೇರಿಗೆ ಬಾಳೆಹಣ್ಣು ಉತ್ತತ್ತಿ ಎಸೆಯುತ್ತಾರೆ. ಹೀಗೆ ಯುಗಾದಿ, ಗೋಕಲಾಷ್ಟಮಿ, ನವರಾತ್ರಿ, ಮಹಾನವಮಿ ಮೊದಲಾದ ಹಬ್ಬದ ದಿನಗಳಲ್ಲಿ ದೇವಸ್ಥಾನದಲ್ಲಿ ಉತ್ಸವಗಳು ಜರುಗುತ್ತವೆ. ಕೊಪ್ಪಳ, ಹುಲಿಗಿಗಳಲ್ಲಿ ನಡೆಯುವ ಜಾತ್ರೆಗಳಲ್ಲಿ ಕನಕಗಿರಿ ಜಾತ್ರೆಯು ಕರ್ನಾಟಕದಲ್ಲಿ ತನ್ನ ಪ್ರಾಮುಖ್ಯತೆಯನ್ನು ಇಂದಿಗೂ ಉಳಿಸಿಕೊಂಡು ಬಂದಿದೆ. ಇದು ಜಾತ್ರೆಯ ಆಕರ್ಷಣೆಯಾದರೆ, ಕನಕಾಚಲ ದೇವಸ್ಥಾನದ ಶಿಲ್ಪಗಳು ಅದ್ಭುತ ಆಕರ್ಷಣೆಯಾಗಿವೆ.

**೯. ಹೇಮಗುಡ್ಡ :**

ಗಂಗಾವತಿ-ಕೊಪ್ಪಳ ರಸ್ತೆಯಲ್ಲಿರುವ ಹೇಮಗುಡ್ಡ ಒಂದು ಆಯಕಟ್ಟಿನ ಪ್ರದೇಶವಾಗಿದೆ. ಐತಿಹಾಸಿಕ ಸ್ಥಳವಾಗಿದ್ದು ಇಲ್ಲಿರುವ ಮಹತ್ವದ ಕೋಟೆಯು ಇದಕ್ಕೆ ಸಾಕ್ಷಿಯಾಗಿದೆ. ಕನಕಗಿರಿ ಇತಿಹಾಸದಲ್ಲಿ ಇದು ಪ್ರಮುಖ ಪಾತ್ರವನ್ನು ವಹಿಸಿದೆ. ಔರಂಗಜೇಬನಿಂದ ಬೆನ್ನಟ್ಟಲ್ಪಟ್ಟ ಸುರುಪುರದ 'ಬಹರಿ ಪಿಡ್ಡನಾಯಕ' ಒಂದು ವರ್ಷ ಕಾಲ ಈ ಕೋಟೆಯಲ್ಲಿ ಅಡಗಿಕೊಂಡಿದ್ದನು. ಇದೇ ಕೋಟೆಯನ್ನು ಆಶ್ರಯಿಸಿದ್ದ ಕನಕಗಿರಿಯ ಹಿರೇನಾಯಕನನ್ನು ಸುರುಪುರದ ಪಾಮನಾಯಕನಿಗೆ ಜಯಿಸಲಾಗಲಿಲ್ಲ. ಈ ಕೋಟೆಯಲ್ಲಿ ಅನೇಕ ಸ್ಮಾರಕಗಳನ್ನೊಳಗೊಂಡ ದೇವಾಲಯಗಳಿವೆ.

**ಹೇಮಗುಡ್ಡ ಕೋಟೆ :** ಕೊಪ್ಪಳ ಜಿಲ್ಲೆಯ ಕೋಟೆ-ಕೊತ್ತಲಗಳ ನಾಡಾಗಿದೆ. ಇಲ್ಲಿ ಅಧಿಕ ಸಂಖ್ಯೆಯಲ್ಲಿ ಕೋಟೆಗಳು ಕಂಡುಬರುತ್ತವೆ. ಅವುಗಳಲ್ಲಿ ಕೊಪ್ಪಳ ಕೋಟೆ, ಮುದಗಲ್ ಕೋಟೆ, ಬಹದ್ದೂರ್ ಬಂಡೆಕೋಟೆ, ಕುಮ್ಮಟದುರ್ಗದ ಕೋಟೆ ಅದರಂತೆ ಹೇಮಗುಡ್ಡ ಕೋಟೆಯು ಒಂದು. ಅದು ಕನಕಗಿರಿ ಪಾಳೆಯಗಾರರ ಚರಿತ್ರೆಯಲ್ಲಿ ಅದು ವಹಿಸಿದ ಪಾತ್ರ ಗಮನಾರ್ಹವಾಗಿದೆ. ಈ ಕೋಟೆಯನ್ನು ಕನಕಗಿರಿಯ ಎರಡನೆಯ ದೊರೆ ಉಡಚನಾಯಕ ನಿರ್ಮಿಸಿದನೆಂದು ಕೋಟೆಯ ಒಳಭಾಗದಲ್ಲಿ ಬೆಟ್ಟಕ್ಕೆ ಹೊಂದಿಕೊಂಡಿರುವ ಗುಂಡೊಂದರಲ್ಲಿ ಅಚ್ಯುತಾಪುರದ ಸುಲಿಪ ಬಸವಣ್ಣನ ಮಾನ್ಯ ಎಂದಿದೆ. ಪ್ರಾಯಶಃ ಕೋಟೆ ನಿರ್ಮಾಣಕ್ಕೆ ಪೂರ್ವ ಇಲ್ಲಿಯ ಜಮೀನನ್ನು ಅಚ್ಯುತಾಪುರದ ಬಸವಣ್ಣ ದೇವರಿಗೆ ದತ್ತಿಯಾಗಿ ಬಿಟ್ಟಿರಬೇಕೆಂದು ತೋರುತ್ತದೆ.[೨೧] ಕೋಟೆ ಒಳಭಾಗದಲ್ಲಿ ಒಂದು ದೊಡ್ಡ ಶಿವ ಪಾರ್ವತಿ ದೇವಾಲಯ, ಲಕ್ಷ್ಮೀನರಸಿಂಹ ದೇವಾಲಯ, ಆಂಜನೇಯ ದೇವಾಲಯ, ದುರ್ಗಾದೇವಾಲಯ, ಅರಮನೆಯಂತಹ

ಕಟ್ಟಡ ಮತ್ತು ವಾಸದ ಮನೆಗಳ ಅವಶೇಷಗಳಿವೆ. ವಾಸ್ತು ದೃಷ್ಟಿಯಿಂದ ಶಿವಪಾರ್ವತಿ ದೇವಾಲಯ ಗಮನ ಸೆಳೆಯುತ್ತದೆ. ಇದನ್ನು ವಿಜಯನಗರದ ಸಂಗಮ ಕಾಲದ ದೇವಾಲಯ ವಾಸ್ತು ವಿನ್ಯಾಸದಲ್ಲಿ ನಿರ್ಮಿಸಲಾಗಿದೆ. ಗರ್ಭಗುಡಿಯ ಮೇಲೆ ಕದಂಬ-ನಾಗರಶೈಲಿಯ ಶಿಖರವಿರುವುದು ವಿಶೇಷ. ಉಳಿದ ದೇವಾಲಯಗಳು ಕನಕಗಿರಿಯ ಮಧ್ಯಮ ಪ್ರಮಾಣದ ದೇವಾಲಯಗಳಂತಿವೆ. ಲೌಖಿಕ ಕಟ್ಟಡದ ಭಾಗವು ಸಂಪೂರ್ಣವಾಗಿ ಕುಸಿದು ಬಿದಿದ್ದೆ. ದುರ್ಗಾ ದೇವಾಲಯವನ್ನು ಈಚೆಗೆ ದುರಸ್ತಿಗೊಳಿಸಿ ವಿಸ್ತರಿಸಲಾಗಿದ್ದು, ಪ್ರತಿವರ್ಷ ನವರಾತ್ರಿ ಉತ್ಸವವನ್ನು ನಡೆಸಲಾಗುತ್ತಿದೆ.

**ಈಶ್ವರ ದೇವಾಲಯ :** ಈಶ್ವರ ದೇವಾಲಯವು ಎತ್ತರದ ಪ್ರದೇಶದಲ್ಲಿದ್ದು ಇದರಲ್ಲಿ ಗರ್ಭಗುಡಿ, ಸಭಾಮಂಟಪ ಮತ್ತು ನಂದಿಮಂಟಪದ ಭಾಗಗಳಿವೆ. ಸಾದಾಕೆತ್ತನೆಯ ಪ್ರವೇಶದ್ವಾರವುಳ್ಳ ಗರ್ಭಗುಡಿಯು ಚೌಕಾಕಾರವಾಗಿದ್ದು, ಇದರಲ್ಲಿ ಯಾವುದೇ ವಿಗ್ರಹಗಳಿಲ್ಲ ಛತ್ತು, ಸಮತಟ್ಟಾಗಿದೆ. ಒಂಭತ್ತು ಅಂಕಣಗಳಿಂದ ಕೂಡಿದ ಸಭಾಮಂಟಪದಲ್ಲಿ ಎರಡು ಮೂಲೆ ಕಂಬಗಳು, ಆರು ಅರ್ಧಕಂಬಗಳು ಮತ್ತು ಆರು ಕಂಬಗಳಿವೆ. ಇವುಗಳು ಚೌಕಾಕಾರವಾಗಿದ್ದು, ಮೇಲ್ಭಾಗದಲ್ಲಿ ಸರಳ ಬೋದಿಗೆಗಳನ್ನು ಹೊಂದಿದೆ. ಎರಡು ತಲಗಳಿಂದ ಕೂಡಿದ ದ್ರಾವಿಡ ಮಾದರಿಯ ಶಿಖರವು ಗರ್ಭಗುಡಿಯ ಮೇಲಿದ್ದು, ಇದರಲ್ಲಿ ಶಾಲ-ಕೂಟ ಸ್ತೂಪಿ ಮತ್ತು ಕಳಸ ಭಾಗಗಳಿವೆ. ಸ್ತೂಪಿಯ ಕೆಳಭಾಗದಲ್ಲಿ ಮೂಲೆಗಳಿಗೆ ನಾಲ್ಕು ನಂದಿಗಳಿವೆ. ಸಭಾಮಂಟಪದ ಮೇಲಿರುವ ಕೈಪಿಡಿ ಗೋಡೆಯಲ್ಲಿ ಶಾಲಾ ಕೂಟಗಳಿಂದ ಕೂಡಿದ ದೇವಕೋಷ್ಠಗಳಿವೆ. ಇವುಗಳನ್ನು ಒಳಗೊಂಡಂತೆ ಶಿಖರವನ್ನು ಇಟ್ಟಿಗೆ ಗಾರೆಯಿಂದ ನಿರ್ಮಿಸಲಾಗಿದೆ. ದೇವಾಲಯಕ್ಕೆ ಕಣಶಿಲೆಯನ್ನು ಬಳಸಲಾಗಿದೆ. ತೆರೆದ ನಂದಿ ಮಂಟಪವು ದೇವಾಲಯದ ಎದುರಿಗಿದ್ದು ಮಧ್ಯದಲ್ಲಿ ನಂದಿ ಶಿಲ್ಪವನ್ನು ಹೊಂದಿದೆ. ಈ ಪ್ರದೇಶದಲ್ಲಿ ಶಾತವಾಹನರ ಕಾಲದ ಮಡಿಕೆ ಅಶೇಷಗಳು, ಬೃಹತ್ ಬಂಡೆಯ ಕೆಳಭಾಗದಲ್ಲಿ ಕೆಂಪು ಮತ್ತು ಬಿಳಿ ವರ್ಣದ ರೇಖಾ ಚಿತ್ರಗಳು ಕಂಡುಬರುವುದರಿಂದ ಪ್ರಾಚೀನ ಮಾನವನ ವಾಸಸ್ಥಳವಾಗಿತ್ತೆಂದು ಹೇಳಬಹುದಾಗಿದೆ.

**೧೦. ಕುಷ್ಟಗಿ :**

ಕುಷ್ಟಗಿಯು ಕೊಪ್ಪಳದ ಜಿಲ್ಲೆಯ ಪ್ರಮುಖ ತಾಲೂಕು ಕೇಂದ್ರವಾಗಿದೆ. ಈ ತಾಲೂಕಿನ ಐತಿಹಾಸಿಕ ಸೊಗಡು, ಸ್ಮಾರಕಗಳು, ಶಿಲಾಶಾಸನಗಳು, ಹೈದ್ರಾಬಾದ್ ಸ್ವಾತಂತ್ರ್ಯ ಹೋರಾಟದ ಕ್ಷಣಗಳು, ಸಮಕಾಲೀನ ಹೋರಾಟದ ರಾಜಕೀಯ, ಸಾಮಾಜಿಕ, ಶೈಕ್ಷಣಿಕ, ಧಾರ್ಮಿಕ ರಂಗಗಳು, ಸಂಸ್ಕೃತಿ ನಾಗರಿಕತೆ ಭಾಷೆ-ಕಲೆ-ಸಂಗೀತ-ಸಾಹಿತ್ಯದ ಶ್ರೀಮಂತಿಕೆಯನ್ನು ಹೊಂದಿದೆ. ಅದರಂತೆ ಈ ತಾಲ್ಲೂಕಿನ ಅನೇಕ ಸ್ಮಾರಕಗಳನ್ನು ತನ್ನಲ್ಲಿ ಅಡಗಿಸಿಕೊಂಡಿದೆ. ಈ ನಗರದ ನಾಲ್ಕು ಪ್ರಮುಖ ಐತಿಹಾಸಿಕ ದೇವಾಲಯಗಳೆಂದರೆ, ರಾಮಲಿಂಗೇಶ್ವರ ದೇವಾಲಯ, ಹುಚ್ಚರಾಯನ ಗುಡಿ, ಕೋರಿಗುಡಿ ಶೈವ ದೇವಾಲಯ, ಹೀಗೆ ಈ ಪ್ರದೇಶದ ಶ್ರೀಮಂತ ಸಾಂಸ್ಕೃತಿಕ ಐತಿಹಾಸಿಕ, ಧಾರ್ಮಿಕ ಪೌರಣಿಕ ಸಾಹಿತ್ಯಿಕ ಚಾರಿತ್ರ್ಯವನ್ನು ಹೊಂದಿದೆ. ಐತಿಹಾಸಿಕವಾಗಿ ಶಿಲಾಯುಗದ ಮಾನವನಷ್ಟು ಪೌರಾಣಿಕವಾಗಿ ಮಹಾಭಾರತದಷ್ಟು ಹಿಂದಕ್ಕೆ ಗುರುತಿಸಬಹುದಾಗಿದೆ.

ಕುಷ್ಟಗಿ ತಾಲ್ಲೂಕಿನ ಜನರು ಧಾರ್ಮಿಕ ಭಕ್ತಿ ಭಾವವುಳ್ಳವರಾಗಿದ್ದು, ಸಮನ್ವಯತೆಯಿಂದ ಮೊಹರಂ, ದೀಪಾವಳಿ, ಈದ್‌ಮಿಲಾದ್, ರಂಜಾನ್, ಬಕ್ರೀದ್, ಶಿವರಾತ್ರಿ, ನಾಗರಪಂಚಮಿ ಇನ್ನು ಮುಂತಾದ ಹಬ್ಬಗಳನ್ನು ಆಚರಿಸುವ ಸಂಪ್ರದಾಯವನ್ನು ಹೊಂದಿದ್ದಾರೆ. ಅವರಂತೆ ಸಾಂಸ್ಕೃತಿಕವಾಗಿ ಈ ಪ್ರದೇಶದಲ್ಲಿ ವೃತ್ತಿ ರಂಗಭೂಮಿ, ಹವ್ಯಾಸಿ ರಂಗಭೂಮಿ, ನಾಟಕ ಕವಿಗಳ ಸಂಗೀತ ಕಲಾವಿದರು, ಡೊಳ್ಳು ಕುಣಿತ, ಕರಡಿ ಮಜಲು ಸಂಪ್ರದಾಯ ಪದ ಜಾನಪದ ಹಾಡುಗಳನ್ನು ಹಾಡುವ ವಾದ್ಯಗಳನ್ನು ನುಡಿಸುವ ಕಲೆ ಕಲಾವಿದರಿದ್ದಾರೆ. ಚಂದ್ರಗಿರಿ, ಅಂಟರಠಾಣ ಪುರ ಇನ್ನು ಮುಂತಾದ ಐತಿಹಾಸಿಕ ಪ್ರದೇಶಗಳಾಗಿವೆ.

**ರಾಮಲಿಂಗೇಶ್ವರ ದೇವಾಲಯ :** ಕಲ್ಯಾಣ ಚಾಲುಕ್ಯರ ಅರಸನಾದ ಜಗದೇಕಮಲ್ಲನ (ಕ್ರಿ.ಶ. ೧೦೧೮ರ ಪುರದ ಶಾಸನದಂತೆ ಕುಷ್ಟಗಿಯು ಆತನ ಅಧೀನದಲ್ಲಿತ್ತು) ಕಾಲದ ಚಾಲುಕ್ಯರ ಶೈಲಿಯ ಗುಡಿಯ ಐದು ಅಡಿ ಎತ್ತರದ ಜಗುಲಿಯ ಮೇಲೆ ನಿರ್ಮಾಣಗೊಂಡಿದೆ. ಪೂರ್ವಾಭಿಮುಖವಾಗಿರುವ ಈ ದೇವಾಲಯದ ನವರಂಗದಲ್ಲಿ ದಕ್ಷಿಣೋತ್ತರಕ್ಕೆ ಬಾಗಿಲುಗಳಿವೆ. ಈ ದೇವಾಲಯ ಜೀರ್ಣೋದ್ಧಾರಗೊಂಡಿದ್ದು ಆದರೂ ಮೂಲರೂಪ ಕಳೆದುಕೊಂಡಿಲ್ಲ. ಗರ್ಭಗುಡಿಯು ತೆರೆದ ಅಂತರಾಳ ಹಾಗೂ ನವರಂಗಗಳನ್ನು ಹೊಂದಿರುವ ಗರ್ಭಗುಡಿಯಲ್ಲಿ ಶಿವಲಿಂಗವಿದೆ. ದ್ವಾರಬಾಗಿಲವಾಡವು ಸಪ್ತ ಶಾಖಾಲಂಕೃತವಾಗಿದ್ದು ಇಕ್ಕೆಲಗಳಲ್ಲಿ ದ್ವಾರಪಾಲಕರಿದ್ದಾರೆ. ಅಲ್ಲಿಯೇ ಇರುವ ಸಪ್ತ ಮಾತೃಕಾ ಪಟ್ಟಿಕೆ. (ಏಳು ತಾಯಂದಿರ ಮೂರ್ತಿ) ಮುಕ್ಕಾಗಿದೆ[೨೪].

ದೇಗುಲದ ಸಭಾಮಂಟಪದಲ್ಲಿ ಆರು ಕಂಬಗಳಿದ್ದು ಇವು ಚಚ್ಚೌಕ, ಅಷ್ಟ ಹಾಗೂ ವೃತ್ತಾಕಾರಗಳಲ್ಲಿವೆ. ಅಲ್ಲದೆ ಇವುಗಳ ಮೇಲೆ ರಾಮಾಯಣ, ಮಹಾಭಾರತಕ್ಕೆ ಸಂಬಂಧಿಸಿದ ಉಬ್ಬು ಶಿಲ್ಪಗಳನ್ನು ಕೊರೆಯಲಾಗಿದೆ. ನಂದಿ ಶಿಲ್ಪವನ್ನು ಸಭಾಮಂಟಪದಲ್ಲಿ ಪ್ರತಿಷ್ಠಾಪಿಸಲಾಗಿದೆ. ಎತ್ತರದ ಅಧಿಷ್ಠಾನದ ಮೇಲೆ ಕಟ್ಟಲಾದ ಈ ದೇಗುಲದ ಗರ್ಭಗುಡಿಯ ಮೇಲೆ ಏಕಲತಾ ಶಿಖರವಿದೆ. ದ್ರಾವಿಡ ಮಾದರಿಯನ್ನು ಹೊಂದಿದ ಶಿಖರದಲ್ಲಿ ಅರೆಗಂಬಗಳು, ಮತ್ತಿತರ ಗಚ್ಚು ಶಿಲ್ಪಗಳಿವೆ. ನವರಂಗದ ಕಂಬಗಳ ಮೇಲೆ ರಾಮಾಯಣ ಸಂಬಂಧಿ ಕಥನಗಳ ಕಿರುಕೆತ್ತನೆಗಳಿವೆ. ಈ ದೇವಸ್ಥಾನದ ವಿಶೇಷವೆಂದರೆ ಯುಗಾದಿ ಪಾಡ್ಯಮಿಯ ದಿನದಂದು ಮಾತ್ರ ಸೂರ್ಯೋದಯದ ಆ ಬಿಸಿಲು ರಾಮಲಿಂಗೇಶ್ವರನ ಪಾದಕ್ಕೆರಗುತ್ತದೆ. ಹೀಗೆ ಕುಷ್ಟಗಿಯ ಪ್ರಮುಖ ಐತಿಹಾಸಿಕ ಸ್ಥಳಗಳಲ್ಲಿ ಒಂದಾಗಿದೆ.

**ಹುಚ್ಚುರಾಯನ ಗುಡಿ :** ಪಟ್ಟಣದ ಪೂರ್ವದಿಕ್ಕಿನಲ್ಲಿ ರಾಷ್ಟ್ರೀಯ ಹೆದ್ದಾರಿ ೧೩ರ ಪಕ್ಕದಲ್ಲಿ ಹಿಂದೂ ಮುಸ್ಲಿಂ ಶೈಲಿಯನ್ನು ಮೈಗೂಡಿಸಿಕೊಂಡ ಸ್ಮಾರಕವೇ ಹುಚ್ಚರಾಯನ ಗುಡಿ. ದ್ರಾವಿಡ ಶೈಲಿಯ ಈ ದೇವಾಲಯವು ಗರ್ಭಗುಡಿಯನ್ನು ಮಾತ್ರ ಹೊಂದಿದೆ. ಛತ್ತಿನವರೆಗೂ ಶಿಲೆಯಿಂದ ನಿರ್ಮಾಣಗೊಂಡಿದ್ದು ಹೊರ ಗೋಡೆಯಲ್ಲಿ ಗಂಡಭೇರುಂಡ ಒಟ್ಟಿಗೆ ನಾಲ್ಕು ಆನೆಗಳನ್ನು ಎತ್ತಿ ಎಸೆಯುತ್ತಿರುವ ಉಬ್ಬು ಚಿತ್ರ, ಕುದುರೆಯೇರಿ ಯುದ್ಧಕ್ಕೆ ಹೊರಟ ಚಿತ್ರ, ಹಾವುಗಾರನ ಚಿತ್ರ, ಈಶ್ವರ, ಸಿಂಹ, ಗಿಳಿ,

ದ್ವಾರಪಾಲಕರ ಉಬ್ಬು ಶಿಲ್ಪ ಚಿತ್ರಗಳಿವೆ. ಗರ್ಭಗುಡಿಯಲ್ಲಿ ದೇವರ ಮೂರ್ತಿ ಇತ್ತೆಂದೂ ವ್ಯಕ್ತಿ ಹಾಗೂ ಲಿಂಗವನ್ನು ಹಿಡಿದು ನಿಂತ ಮತ್ತೊಬ್ಬ ಗಡ್ಡಧಾರಿ ವ್ಯಕ್ತಿಯ ಚಿತ್ರಣವಿದೆ. ಇದಕ್ಕೆ ಸುಂದರವಾದ ಭುವನೇಶ್ವರ ಶಿಲ್ಪವಿದ್ದು, ಪಶ್ಚಿಮ ಗೋಡೆಯಲ್ಲಿ ಒಂಟೆ, ಮಿಥುನಶಿಲ್ಪಗಳು, ಮರದ ಮೇಲೆ ಹಣ್ಣು ಕೀಳುತ್ತಿರುವ ಕಪಿಗಳು, ಹಾಗೆಯೇ ಎತ್ತರ ಗೋಡೆಯಲ್ಲಿ ರತಿಯ ಶಿಲ್ಪ, ರತಿಯ ಇಕ್ಕೆಲಗಳಲ್ಲಿ ಗಿಳಿಗಳಿವೆ.[೨೫]

ಈ ದೇಗುಲದ ಅಧಿಷ್ಠಾನವು ಉಪಾನ, ಜಗತಿ, ಪಟ್ಟಿಕೆಯ ಭಾಗಗಳನ್ನು ಹೊಂದಿದೆ. ಗರ್ಭಗುಡಿಯ ಮೇಲೆ ಹಿಂದೂ ಮುಸ್ಲಿಂ ಶೈಲಿಯ ಗೋಳಾಕಾರದ ಗುಮ್ಮಟವಿದೆ. ಗರ್ಭಗುಡಿಯಲ್ಲಿ ಯಾವುದೇ ಶಿಲ್ಪವಿರದೆ ಇದನ್ನು ಹುಚ್ಚರಾಯನ ಗುಡಿ ಎಂದು ಕರೆಯಲಾಗುತ್ತದೆ.

**ಕೋರಿಗುಡಿ : ಶೈವ ದೇವಾಲಯ :** ಕೋರಿ ಗುಡಿ ಶೈವ ದೇವಾಲಯವು ಪೂರ್ವ ದಿಕ್ಕಿನಲ್ಲಿದ್ದು ಇದನ್ನು ಹಿಂದೂ-ಇಸ್ಲಾಂ ಶೈಲಿಯ ತಾಜ್‌ಮಹಲ್ ಎಂದು ಸ್ಥಳೀಯರು ಕರೆಯುತ್ತಾರೆ. ಈ ದೇವಾಲಯವು ಸುಮಾರು ೩೦-೩೫ ಅಡಿ ಎತ್ತರವಿದೆ. ಎರಡು ಅಡಿ ಎತ್ತರ, ನಾಲ್ಕು ಅಡಿ ಅಗಲ, ಎರಡು ಅಡಿ ಉದ್ದದ ಕಲ್ಲುಗಳಿಂದ ನಿರ್ಮಾಣಗೊಂಡಿದೆ. ಎತ್ತರದ ಜಗಲಿಯ ಮೇಲೆ ಚಚ್ಚೌಕ ತಳವಿನ್ಯಾಸದಲ್ಲಿ ಕಟ್ಟಲಾದ ದೇವಾಲಯವಾಗಿದೆ. ಗರ್ಭಗುಡಿ ಮಾತ್ರ ಹೊಂದಿರುವ ಇದರ ಬಾಗಿಲುವಾಡದಲ್ಲಿ ಪದ್ಮಗಳನ್ನು ಹಿಡಿದು ನಿಂತ ದ್ವಾರಪಾಲಕರಿದ್ದಾರೆ. ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ. ಅಲ್ಲದೆ ಅರೆಗಂಬಗಳು, ಪದ್ಮ ಹೂ ಬಳ್ಳಿಗಳ ಅಲಂಕರಣೆಗಳನ್ನು ಬಾಗಿಲುವಾಡದಲ್ಲಿ ನಿರ್ಮಿಸಲಾಗಿದೆ. ಗರ್ಭಗುಡಿಯ ಒಳಭಾಗದಲ್ಲಿ ಗಣೇಶನ ವಿಗ್ರಹವಿದೆ. ಭುವನೇಶ್ವರಿಯು ಗೋಲಾಕಾರವಾಗಿದ್ದು ಮುಸ್ಲಿಂ ಮಾದರಿಯಲ್ಲಿದೆ. ದೇವಾಲಯಕ್ಕೆ ಸೋಪಾನಗಳಿವೆ. ವಿಮಾನ ಭಾಗದಲ್ಲಿ ಮುಂಚಾಚಿದ ಚಜ್ಜಾವಿದೆ. ಗರ್ಭಗುಡಿಯ ಪ್ರದಕ್ಷಿಣೆಗೆ ಅನುವಾಗಲು ತೆರೆದ ಪ್ರದಕ್ಷಣಾ ಪಥವಿದೆ. ದೇಗುಲದ ಮೇಲಿನ ಕೈಪಿಡಿ ಗೋಡೆಯಲ್ಲಿ ದೈತ್ಯಾಕಾರದ ಕೆತ್ತನೆ ಮತ್ತು ಅವುಗಳಲ್ಲಿ ಸರಪಳಿಯಿಂದ ಇಳಿಬಿದ್ದ ಪದ್ಮದ ಗೊಂಚಲುಗಳಿವೆ. ನಾಲ್ಕು ದಿಕ್ಕುಗಳಲ್ಲಿ ವಿವಿಧ ಶಿಲ್ಪಗಳಿದ್ದು ಅದರಲ್ಲಿ ಮುಂಭಾಗ ಕೆದರಿದ ಜಂಟೆಯಿರುವ ಹಾಗೂ ಪದ್ಮಾಸನದಲ್ಲಿ ಕುಳಿತ ವ್ಯಕ್ತಿಯೋರ್ವನ ಶಿಲ್ಪವಾಗಿದೆ. ಉಳಿದ ಮೂರು ಭಾಗಗಳಲ್ಲಿ ಸಂಗೀತ ಮತ್ತು ನೃತ್ಯಗಾರರ ಉಬ್ಬುಗೆತ್ತನೆಗಳಿವೆ. ಗರ್ಭಗುಡಿಯ ಮೇಲೆ ನಾಲ್ಕು ಮೂಲೆಗಳಲ್ಲಿ ಮಿನಾರುಗಳಿವೆ. ಅಲ್ಲದೆ ಮೇಲ್ಭಾಗದಲ್ಲಿ ಗಾರೆ-ಗಚ್ಚು ಕಲ್ಲುಗಳಿಂದ ರಚಿಸಿದ ಗೋಳಗುಮ್ಮಟವಿದೆ.[೨೬]



## ೧೧. ಚಂದ್ರಗಿರಿ :

ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲ್ಲೂಕು ಐತಿಹಾಸಿಕ ಸ್ಮಾರಕಗಳ ಸಾಂಸ್ಕೃತಿಕ ಪರಂಪರೆಯ ಕೀರ್ತಿಯ ಗರಿಯನ್ನು ಹೊಂದಿರುವ ಚಂದ್ರಗಿರಿಯು ಭವ್ಯವಾದ ಬೆಟ್ಟದ ಮೇಲಿನ ನಿಸರ್ಗ ಸೌಂದರ್ಯದ ಪ್ರವಾಸಿ ತಾಣವೆಂದೇ ಕರೆಯಲಾಗಿದೆ. ಈ ಸ್ಥಳದ ಸುತ್ತಲೂ ಕೋಟೆ, ದೇಗುಲ, ಮನೆಯ ಅವಶೇಷಗಳು

ಕಂಡುಬರುತ್ತವೆ. ಈ ಪ್ರದೇಶದ ಅತ್ಯಂತ ಪ್ರಾಚೀನ ದೇವಾಲಯವೆಂದರೆ ಚಂದಾಲಿಂಗೇಶ್ವರ ದೇವಾಲಯವಾಗಿದೆ. ಇಲ್ಲಿ ಗಂಗಮಾಳಮ್ಮ, ಮುದ್ದಮ್ಮ, ಬಸವಣ್ಣ, ಆದಿಶೇಷ, ದುರಗಮ್ಮ, ಸಂಗಮೇಶ್ವರ, ಈಶ್ವರ, ಲಕ್ಷ್ಮಿ, ಸರಸ್ವತಿ, ವೆಂಕಟೇಶ್ವರ ಇನ್ನು ಮುಂತಾದ ಸಣ್ಣಪುಟ್ಟ ದೇವಾಲಯಗಳು ಕಂಡುಬರುತ್ತವೆ.

**ಚಂದಾಲಿಂಗೇಶ್ವರ ದೇವಾಲಯ :** ಚಂದ್ರಗಿರಿ ದೇವಾಲಯವು ಮರುಭೂಮಿಯಲ್ಲಿನ ಓಯಸಿಸ್‌ನಂತಿದೆ. ಈ ದೇವಾಲಯವು ಗರ್ಭಗುಡಿ, ಅಂತರಾಳ, ಸಭಾಮಂಟಪ, ಮುಖಮಂಟಪ ಮತ್ತು ನಂದಿ ಮಂಟಪಗಳನ್ನು ಒಳಗೊಂಡಿದೆ. ಗರ್ಭಗುಡಿಯ ಪ್ರವೇಶದ್ವಾರದಲ್ಲಿ ಶಿವಲಿಂಗ, ಭುವನೇಶ್ವರಿಯಲ್ಲಿ ಪದ್ಮ ಇವೆ. ಅಂತರಾಳಕ್ಕೆ ಸಾದಾಕೆತ್ತನೆಯ ಪ್ರವೇಶದ್ವಾರ, ಎರಡೂ ಬದಿಗೆ ಜಾಲಂಧ್ರಗಳು, ಒಳಗೆ ಚೌಕಾಕಾರದ ನಾಲ್ಕು ಕಂಬಗಳು ಸಮತಟ್ಟಾದ ಮೇಲ್ಛಾವಣಿಗಳಿವೆ. ಒಂಭತ್ತು ಅಂಕಣಗಳನ್ನು ಒಳಗೊಂಡ ಈ ಸಭಾಮಂಟಪದ ಪ್ರವೇಶದ್ವಾರದ ಲಲಾಟಬಿಂಬದಲ್ಲಿ ಗಣೇಶನ ವಿಗ್ರಹವಿದೆ. ಹಾಗೆಯೇ ಎರಡು ಬದಿಗೆ ಶೈವದ್ವಾರಪಾಲಕರು, ಒಳಗೆ ಚೌಕ ವೃತ್ತಾಕಾರ, ಘಂಟಫಲಕ ಮತ್ತು ಬೋದಿಗೆಗಳನ್ನೊಳಗೊಂಡ ಹನ್ನೆರಡು ಕಂಬಗಳಿವೆ.

ಇತ್ತೀಚೆಗೆ ಸೇರ್ಪಡೆಗೊಂಡಿರುವ ಮುಖಮಂಟಪದಲ್ಲಿ ಮೂರು ಅಂಕಣಗಳಿವೆ. ಇದರಲ್ಲಿ ವಿಜಯನಗರ ಮಾದರಿಯ ಎರಡು ಮೂಲೆ ಕಂಬಗಳು, ನಾಲ್ಕು ಅರ್ಧಕಂಬಗಳು ಹಾಗೂ ಮಧ್ಯದಲ್ಲಿ ಎರಡು ಕಂಬಗಳಿವೆ. ಸಭಾಮಂಟಪದ ಮಾಳಿಗೆಯ ಸುತ್ತಲೂ ಮುಂಚಾಚಿದ ಚಜ್ಜಾ, ಕೈಪಿಡಿ ಗೋಡೆಯಿದ್ದು ಇದರಲ್ಲಿ ಗಾರೆ ಶಿಲ್ಪಗಳಿವೆ. ಗರ್ಭಗುಡಿಯ ಮೇಲೆ ಮೂರು ತಲಗಳಿಂದ ಕೂಡಿದ ಸ್ತೂಪಿ ಮತ್ತು ಕಳಸ ಭಾಗವನ್ನೊಳಗೊಂಡ ದ್ರಾವಿಡ ಶೈಲಿಯ ಶಿಖರ. ಇದರ ನಾಲ್ಕು ಸಿಂಹದ ಗಾರೆ ಶಿಲ್ಪಗಳಿವೆ. ಈ ದೇಗುಲದ ಕಟ್ಟಡಕ್ಕೆ ಕಪ್ಪು ಮಿಶ್ರಿತ ನೀಲಿ ಛಾಯೆಯ ಬಳಪದ ಕಲ್ಲನ್ನು ಬಳಸಿದ್ದು ನಂತರ ಕಣಶಿಲೆಯಿಂದ ಜೀರ್ಣೋದ್ಧಾರಗೊಳಿಸಲಾಗಿದೆ.

ಮುಂಭಾಗದಲ್ಲಿ ಒಂಬತ್ತು ಅಂಕಣಗಳಿಂದ ಕೂಡಿದ ತೆರೆದ ನಂದಿ ಮಂಟಪವಿದೆ. ಇದರಲ್ಲಿ ಕಪ್ಪುಶಿಲೆಯ ಮೂರು ಅಡಿ ಎತ್ತರದ ನಂದಿಶಿಲ್ಪ, ಕಲ್ಯಾಣ ಚಾಲುಕ್ಯ ಶೈಲಿಯ ಹನ್ನೆರಡು ಕಂಬಗಳು ಹಾಗೂ ನಾಲ್ಕು ಅರ್ಧಗಂಬಗಳಿವೆ. ದ್ವಾರಮಂಟಪವು ಕಮಾನಿನಾಕೃತಿಯಲ್ಲಿದ್ದು, ಮೇಲ್ಭಾಗದಲ್ಲಿ ಮಕರ ತೋರಣ, ಮಧ್ಯದಲ್ಲಿ ವಿಜಯನಗರ ಮಾದರಿಯ ನಾಲ್ಕು ಕಂಬಗಳು ಇವೆ. ಪ್ರಾಕಾರದೊಳಗೆ ಶಿವಲಿಂಗ, ನಾಗರಕಲ್ಲು, ವೀರಗಲ್ಲು, ಸಪ್ತಮಾತೃಕಾ ಮತ್ತು ಶಾಸನ ಶಿಲ್ಪಗಳಿವೆ. ಈ ಚೆಂದಾಲಿಂಗೇಶ್ವರವು ವಿಜಾಪುರದ ಸುಲ್ತಾನನ ಕಾಲದಲ್ಲಿ 'ಚಂದ್ರಗಿರಿ' ಎಂಬ ಮಂಡಲವಾಗಿತ್ತು.[೨] ಹೀಗೆ ಇಷ್ಟೆಲ್ಲ ಇತಿಹಾಸವನ್ನು ಹೊಂದಿರುವ ಈ ಸ್ಥಳವು ಕೊಪ್ಪಳ ಜಿಲ್ಲೆಯ ಐತಿಹಾಸಿಕ ತಾಣವಾಗಬೇಕಾಗಿದೆ.

**೧೨. ಪುರ :**

ಕುಷ್ಟಗಿ ತಾಲೂಕಿನ ಐತಿಹಾಸಿಕ ಹಾಗೂ ಕರ್ನಾಟಕದ ಸಂಸ್ಕೃತಿ ಭವ್ಯ ಪರಂಪರೆಯ ಗತವೈಭವವನ್ನು ಎತ್ತಿ ಹಿಡಿದಿರುವ ಸ್ಥಳವೇ ಪುರವಾಗಿದೆ. ಕೋಟಿಲಿಂಗಗಳ ತಾಣ ಹಾಗೂ ಅತ್ಯಂತ

ಪ್ರಾಚೀನ ದೇವಾಲಯಗಳ ಸ್ಮಾರಕವನ್ನು ಹೊಂದಿರುವ ಈ ಗ್ರಾಮವು ಕೊಪ್ಪಳ ಜಿಲ್ಲೆಯ ಸಾಂಸ್ಕೃತಿಕ ಪರಂಪರೆಗೆ ಕೈಗನ್ನಡಿಯಾಗಿದೆ.

**ಕೋಟಿಲಿಂಗಗಳ ದೇವಾಲಯ :** ಕೋಟಿಲಿಂಗಗಳ ದೇವಾಲಯದ ದಕ್ಷಿಣೋತ್ತರಗಳ ಇಕ್ಕೆಲಗಳಲ್ಲಿರುವ ಸಾಲು ಮಂಟಪಗಳು ಅನೇಕ ಲಿಂಗಗಳು ಹಾಗೂ ಇನ್ನಿತರ ಮೂರ್ತಿಗಳ ಸಂಗಮವಾಗಿದೆ. ಸುಮಾರು ಮೂರು ಅಡಿ ಎತ್ತರದ ಸಂಗಮೇಶ್ವರನ ಶಿಲಾಮೂರ್ತಿ, ವರದಾ ಶಂಕರಲಿಂಗ ಮೂರ್ತಿಗಳೂ ಇವೆ. ಎಂಭತ್ತೊಂದು ಲಿಂಗಗಳ ಸಂಗಮವಾದ ಮೂವತ್ತೊಂದು ಮಂಟಪಗಳಿವೆ. ಏಳನೇ ಮಂಟಪದಲ್ಲಿ ಸಪ್ತಾಶ್ವರಥಿಕ ಸೂರ್ಯನ ಶಿಲ್ಪಕಲ್ಲಿಗೆ ಜೀವನೀಡಿದಂತಿದೆ. ಇಲ್ಲಿಯೇ ಚೋಳರಾಜ ಕುಲೋತ್ತುಂಗನ ಆಸ್ಥಾನದ ಶೆಕ್ಕಿಳಾರ ರಚಿಸಿದ ಪೆರಿಯ ಪುರಾಣದ ಆಧಾರಿತ ೬೩ ಶಿವಶರಣರನ್ನು ಸ್ಮರಿಸುವ ದೃಶ್ಯವಿದೆ. ಅನಂತರ ಪಂಚಲಿಂಗ, ಅಷ್ಟಲಿಂಗ, ಅಪರೂಪದ ನವಗ್ರಹಲಿಂಗ, ಗೌರಿ ಶಂಕರಲಿಂಗ, ಮತ್ಸ್ಯ, ಆದಿಶೇಷ, ಹರಿಹರ ಬ್ರಹ್ಮಾದಿಗಳ ಮೂರ್ತಿಗಳನ್ನು ಕಾಣಬಹುದು. ಇದರ ಎದುರಿಗೆ ನೂರು ಲಿಂಗಗಳ ಮೂರು ಸಾಲುಗಳ ಇದರ ಅಭಿಮುಖಕ್ಕೆ ಭಕ್ತ ಸಿರಿಯಾಳ, ಚಾಂಗುಣೆಯರ ಶಿಲಾಮೂರ್ತಿಗಳಿವೆ. ಒಂದು ದೊಡ್ಡ ಲಿಂಗದಲ್ಲಿ ೫೦೧ ಸಣ್ಣ ಲಿಂಗಗಳಿವೆ, ಶಿಲ್ಪವು ನೋಡುಗರನ್ನು ಆಶ್ಚರ್ಯಗೊಳಿಸುತ್ತದೆ. ಅದರಲ್ಲಿರುವ ಮತ್ತೊಂದು ಬೃಹತ್ ಲಿಂಗದಲ್ಲಿ ೧೦೦೧ ಚಿಕ್ಕ ಚಿಕ್ಕ ಲಿಂಗಗಳಿವೆ. ಹೀಗೆ ಇಂತಹ ಲಿಂಗಗಳು ಅಲ್ಲಲ್ಲಿ ಭಕ್ತಾಧಿಗಳಿಗೆ ದರ್ಶನ ನೀಡುತ್ತವೆ.

ಪರಶುರಾಮನ ತಾಯಿ ರೇಣುಕಾದೇವಿಯ ಸರ್ಪದ ಸಿಂಬೆ ಮಾಡಿ ಮರಳು (ಉಸುಕಿನ) ಮಡಿಕೆಯ ಮಾಡಿ ನೀರು ತರುವ ದೃಶ್ಯ ಪುರಾಣ ಕಾಲಕ್ಕೆ ಕರೆದೊಯ್ಯುತ್ತದೆ. ಅಲ್ಲದೇ ಏಕಾದಶ ಲಿಂಗಗಳನ್ನು ಕಾಣಬಹುದು. ಇದರ ಗರ್ಭಗುಡಿಯ ಮಂಟಪದ ಮೇಲ್ಛಾವಣಿಗೆ ಆಂಜನೇಯನ ಶಿಲ್ಪ ಚಿತ್ರವು ಇದೆ. ಇಲ್ಲಿಯೇ ಭಾವಿಯೊಂದು ನಾಲ್ಕು ಕಂಬಗಳ ಮಂಟಪದಲ್ಲಿದೆ. ಇಲ್ಲಿಯ ಸಣ್ಣ ಬಾಗಿಲನ್ನು ಇಣುಕಿದಾಗ ಪ್ರತ್ಯಕ್ಷವಾಗುವುದೇ ಬೃಹದಾಕಾರದ ಸೋಮನಾಥ ಲಿಂಗ, ಈ ಲಿಂಗದ ಜಲಧಾರೆ ಬಲಗಡೆ ಇರುವುದೊಂದು ವೈಶಿಷ್ಟ್ಯಮಯ. ಈ ಸೋಮನಾಥನ ದೇವಾಲಯದ ಹಿಂದೆ ಬನಶಂಕರಿ ದೇವಾಲಯವಿದೆ. ಹೊರಭಾಗದಲ್ಲಿ ಈಶ್ವರ ದೇವಾಲಯವಿದೆ. ಅದರ ಪಕ್ಕದಲ್ಲಿ ಕೈಕೊಳದ ಕಂಬವಿದೆ. ಇಲ್ಲಿಂದ ಕೆಲವು ಗಜಗಳ ಅಂತರದಲ್ಲಿ ಬೇವಿನ ಮರದ ಕೆಳಗೆ ಒಂದು ಲಿಂಗವಿದೆ. ಇದಕ್ಕೆ ಮುನಿಸು ಲಿಂಗವೆನ್ನುತ್ತಾರೆ.[೨೯] ಈ ದೇವಾಲಯದ ಗರ್ಭಗುಡಿಯ ಮುಂದೆ ಕಲ್ಲಿನ ಹರಿವಾಣವಿದೆ. ಈ ಎಲ್ಲಾ ಲಿಂಗಗಳ ಸ್ನಾನ, ಪೂಜೆಯ ಅನಂತರ ನೈವೇದ್ಯ ಮಾಡುವಾಗ ಈ ಹರಿವಾಣದಲ್ಲಿ ಹಾಕಿ ಒಂದು ಸುತ್ತು ತಿರುಗಿದರೆ ಅಲ್ಲಿರುವ ಎಲ್ಲಾ ಲಿಂಗಗಳಿಗೂ ಏಕಕಾಲಕ್ಕೆ ನೈವೇದ್ಯ ಅರ್ಪಿಸಿದಂತೆ ಎಂಬ ನಂಬಿಕೆ ಇದೆ. ಕಣ್ಣು-ಕಾಲು ಎರಡು ಇದ್ದ ಭಾಗ್ಯವಂತರು ಪುರ ನೋಡಬೇಕು ಎಂಬ ಜನವಾಣಿ ಪ್ರಸ್ತುತಕ್ಕೆ ಸಮಂಜಸವಾಗುತ್ತದೆ.

**ಸೋಮೇಶ್ವರ ದೇವಾಲಯ :** ಪ್ರಾಚೀನ ಕಾಲದಲ್ಲಿ ಪ್ರಮುಖ ಧಾರ್ಮಿಕ ಕ್ಷೇತ್ರವಾದ ಈ ಗ್ರಾಮದಲ್ಲಿ ಸೋಮೇಶ್ವರ, ಗವರೇಶ್ವರ ದೇವಾಲಯಗಳು ಪ್ರಸಿದ್ಧವಾದವು. ಕ್ರಿ.ಶ. ೧೧೧೮ರಲ್ಲಿ ಚಾಲುಕ್ಯ ಅರಸ

ಜಗದೇಕಮಲ್ಲನ ಕಾಲದ ಶಾಸನದಲ್ಲಿ ಈತನ ಪ್ರಚಂಡ ದಂಡನಾಯಕ ಗುಣ ಭೂಷಣನ ಉಲ್ಲೇಖವಿದೆ. ಈ ದೇವಾಲಯವು ಮೇಲ್ನೋಟಕ್ಕೆ ಗೋಪುರಗಳ ಸಂಗ್ರಹಾಲಯದಂತಿದೆ. ಮಹಾದ್ವಾರದ ಒಳಗೆ ಪ್ರವೇಶಿಸಿದಂತೆ ಎದುರಿಗೆ ವೀರಭದ್ರ ದೇವಾಸ್ಥಾನ, ತ್ರಿಪುರ ಸಂಹಾರದ ಉಬ್ಬುಶಿಲ್ಪ ಚಿತ್ರ ಶಿಲ್ಪಕಲೆಯ ಕೌತುಕವನ್ನು ಕೆದುಕುವಂತಿದೆ.

ದ್ವಿತಿಯ ದ್ವಾರದ ಮೇಲ್ಭಾಗದಲ್ಲೇ ನಾಗರ ಹಾವುಗಳಿಂದಲೇ ಹೆಣೆದಂತೆ ತೋರ್ಪತೋರಣ, ಇದರ ಎಡಗಡೆ ಗಜಗೌರಿ ವೃತಕ್ಕಾಗಿ ಭೀಮಸೇನನು ಇಂದ್ರಲೋಕದ ಕಾಮಧೇನುವನ್ನು ಕರೆತರಲು ಹೊರಟಾಗ ಪುರುಷ ಮೃಗವೊಂದು ಅಡ್ಡಿಪಡಿಸಿದ ಚಿತ್ರ ಮನಮೋಹಕವಾಗಿದೆ. ಬಲಭಾಗದಲ್ಲಿ ಆದಿಶೇಷನ ವಿಗ್ರಹ, ಎದುರಿಗೆ ಮಯೂರ ವಾಹನಧಾರಿಯಾದ ಷಣ್ಮುಖ, ಉಮಾಮಹೇಶ್ವರ, ವಿನಾಯಕರ ಉಬ್ಬುಶಿಲ್ಪ ಕೆತ್ತನೆಗಳಿವೆ. ಪಕ್ಕದಲ್ಲಿ ಗೋವರ್ಧನ ಗಿರಿಧಾರಿ ಶ್ರೀ ಕೃಷ್ಣ ಪರಮಾತ್ಮನ ಕಲಾ ಕುಸುಮವಿದೆ. ಬಲಭಾಗದಲ್ಲಿ ಗೋಕರ್ಣದ ಆತ್ಮಲಿಂಗದ ಪ್ರತಿಷ್ಠಾಪನೆಗಾಗಿ ದನಗಾಹಿ ಗಜಾನನ, ರಾವಣನ ಚಿತ್ರ ಪೌರಾಣಿಕ ಕಥೆ ಹೇಳುತ್ತದೆ. ಇಲ್ಲಿರುವ ಮೂರುಕಾಲಿನ ಶಿಲಾ ಮಂಚವು ಸಿಧಿರಕ್ಷಣೆಗಾಗಿ ಹಂಪೆಯಿಂದ ಬರುವ ವಿರೂಪಾಕ್ಷನ ಸರ್ಪ ಮಲಗಲು ಸೇವೆ ಮಾಡುತ್ತಿದೆ ಎಂಬ ನಂಬಿಕೆಯಿದೆ. ಇದರ ಎದುರಿನ ಒಳಪ್ರಾಂಗಣದಲ್ಲಿ ಚತುರ್ಮುಖ ನಂದಿಯ ವಿಗ್ರಹವು ಕಲಾ ಪ್ರೌಢಿಮೆಗೆ ಹಿಡಿದ ಕೈಗನ್ನಡಿಯಾಗಿದೆ. ಇದರ ಇಕ್ಕೆಲಗಳಲ್ಲಿ ಶಿವಲಿಂಗಗಳನ್ನು ಹೊತ್ತ ಆನೆಗಳ ಮನಾಕರ್ಷಕ ಮೂರ್ತಿಗಳಿವೆ.

ಶ್ರೀಮನ್ನಾರಾಯಣ, ಮಹಿಷಾಸುರ ಮರ್ದಿನಿಯ ಶಿಲಾ ಮೂರ್ತಿಗಳೂ ಇವೆ. ಈ ದ್ವಾರದ ಎದುರಿಗೆ ಪಂಪಾ ವಿರೂಪಾಕ್ಷ ಲಿಂಗವಿದೆ. ಪಕ್ಕದ ಮಂಟಪದಲ್ಲಿ ಕೊಲ್ಲಾಪುರದ ಸಿದ್ಧರಾಮೇಶ್ವರ ಲಿಂಗ ಕಾಶೀ ವಿಶ್ವನಾಥನ ಲಿಂಗಗಳಿವೆ. ಮೂರನೇ ದ್ವಾರದ ಬಲಗಡೆ ಹಾಲಭಾವಿ (ಅಮೃತಭಾವಿ) ಇದೆ. ಇಲ್ಲಿ ಸುಮಾರು ಸಪ್ತಬಾವಿಗಳು ಇದ್ದವೆಂದು ಹೇಳುತ್ತಾರಾದರೂ ಸದ್ಯಕ್ಕೆ ಪಂಚಬಾವಿಗಳು ನೋಡಬಹುದಾಗಿದೆ. ಈ ಲಿಂಗಗಳ ಪೂಜೆಗಾಗಿ ನೀರನ್ನು ಬಳಸಲು ಇವುಗಳನ್ನು ತೋಡಿದಂತೆ ಬಾಸವಾಗುತ್ತದೆ. ಇವುಗಳು ಕೇವಲ ಬಾವಿಗಳು ಇಡೀ ಸ್ವರ್ಗ ಲೋಕವನ್ನೇ ತಮ್ಮ ಸುತ್ತಲೂ ಶೃಂಗರಿಸಿಕೊಂಡಿವೆ. ಆಂಜನೇಯ, ಕಲ್ಪವೃಕ್ಷ, ಕಾಮಧೇನು ಮೂರುವರೆ ಅಡಿ ಎತ್ತರದ ಏಕಶಿಲಾ ಬೃಂದಾವನವು ಸುಂದರವಾಗಿ ನಿರ್ಮಿಸಲಾಗಿದೆ. ಇನ್ನು ಒಳಗಡೆ ಕತ್ತಲೆಯನ್ನು ಸೀಳಿಕೊಂಡು ಸುಮಾರು ಐದು ಅಡಿ ಎತ್ತರದ ಕಾಳ ಭೈರವನ ಮೂರ್ತಿಯಿದೆ. ಪಕ್ಕದಲ್ಲಿ ಬಿಲ್ಲುಧಾರಿ ಈಶ್ವರ, ಬೇಡರಕಣ್ಣಪ್ಪ, ಸಾರಾಂಗ, ಬಿಲ್ವಪತ್ರೆ ಗಿಡಗಳು, ಕಲ್ಲಲ್ಲಿ ಅರಳಿದ್ದು ನೋಡುಗರ ಸೂಕ್ಷ್ಮತೆಯನ್ನು ಪರೀಕ್ಷಿಸುವಂತಿದೆ. ಇದರ ಹಿಂದೆ ನಂದಿವಾಹನ, ಉಗ್ರನರಸಿಂಹ, ವೆಂಕಟೇಶ್ವರ, ವಿಷ್ಣು, ಲಕ್ಷ್ಮೀ, ಗಜಲಕ್ಷ್ಮೀ, ಶಿವಪಾರ್ವತಿ, ಷಣ್ಮುಖ, ಸೂರ್ಯ, ನೈವೇದ್ಯದ ಹೆಸರಿನಲ್ಲಿ ಇಷ್ಟಾರ್ಥಗಳ ಈಡೇರಿಕೆಯ ಸಂಕೇತವಾದ ಕಲ್ಲಿನ ಹರಿವಾಣ, ಚಂದ್ರ, ದುರ್ಗಿ ಇತ್ಯಾದಿ, ಶಿಲ್ಪಮೂರ್ತಿಗಳು ಬೀಡುಬಿಟ್ಟಿರುವಂತೆ ತೋರುತ್ತವೆ. ಹಾಳುಬಾವಿಯ ಪಶ್ಚಿಮ ಮೂಲೆಯಲ್ಲಿ ಸೂರ್ಯ, ಚಂದ್ರ, ಲಕ್ಷ್ಮೀನರಸಿಂಹ ಮೂರ್ತಿಗಳು ಕೈಲಾಸನಾಥನ ರಥಗಳು ಶಿಲ್ಪಕಲಾ ಕುಸುರಿ, ನೋಡುವ ಪ್ರವಾಸಿಗರನ್ನು ಆಕರ್ಷಿಸುತ್ತವೆ.[೧೦] ಹೀಗೆ ಪುರವು ಕುಷ್ಟಗಿ ತಾಲ್ಲೂಕಿನ ಮಹತ್ವದ ಐತಿಹಾಸಿಕ ಸ್ಥಳವಾಗಿದೆ.

೧೩. ಇಟಗಿ :

ಯಲಬುರ್ಗಾ ತಾಲ್ಲೂಕಿನಿಂದ ಸುಮಾರು ೨೩ ಕಿ.ಮೀ. ದೂರದಲ್ಲಿದೆ. ನಾಡಿನ ಸುಂದರ ಮತ್ತು ಅಪೂರ್ವ ಕೆತ್ತನೆಗಳಿಂದ ಕೂಡಿದ ದೇವಾಲಯಗಳಲ್ಲಿ ಇದು ದೇವಾಲಯಗಳ ಚಕ್ರವರ್ತಿ ಎಂದು ತನ್ನ ಖ್ಯಾತಿಯನ್ನು ಪಡೆದುಕೊಂಡಿದೆ. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಇಟಗಿ ಗ್ರಾಮವು ಸಾಂಸ್ಕೃತಿಕ ಕ್ಷೇತ್ರದಲ್ಲಿ ತನ್ನ ಕಲಾ ಪ್ರೌಢಿಮೆಯನ್ನು ಪಡೆದುಕೊಂಡಿತ್ತು. ಕೊಪ್ಪಳ ಜಿಲ್ಲೆಯ ನೋಡುವ ಐತಿಹಾಸಿಕ ಸ್ಥಳಗಳಲ್ಲಿ ಪ್ರವಾಸಿಗರ ಆಕರ್ಷಣೀಯ ಸ್ಥಳವಾಗಿದೆ. ಈ ಸ್ಥಳದ ಇತರ ಪ್ರಮುಖ ದೇವಾಲಯಗಳೆಂದರೆ, ಸರಸ್ವತಿ, ಚಂದಮೇಶ್ವರ ಮೂರ್ತಿ ನಾರಾಯಣ ಇನ್ನು ಮುಂತಾದವುಗಳನ್ನು ನೋಡಬಹುದಾಗಿದೆ.

**ಮಹಾದೇವ ದೇವಾಲಯ :** ಕರ್ನಾಟಕದ ಸುಪ್ರಸಿದ್ಧವಾದ ದೇವಾಲಯಗಳಲ್ಲಿ ಇಟಗಿಯ ಮಹಾದೇವ ದೇವಾಲಯವೂ ಒಂದು. ಅದು ಕಲ್ಯಾಣ ಚಾಲುಕ್ಯರ ವಾಸ್ತು ರಚನೆ ಮತ್ತು ಕಲಾಕುಸುರಿನ ಉತ್ಕೃಷ್ಟ ನಿರ್ಮಾಣವಾಗಿದೆ. ಹೂವು ಅರಳಿದಂತೆ ಇಲ್ಲಿ ಕಲ್ಲರಳಿ ಕಲೆಯಾದ ಬಗ್ಗೆ ವಿಸ್ಮಯವನ್ನುಂಟು ಮಾಡುತ್ತದೆ. ಚಾಲುಕ್ಯ ಶೈಲಿಯು ಪರಿಪಕ್ವಗೊಂಡು ತನ್ನ ಔನ್ನತ್ಯವನ್ನು ಪಡೆದ ಕಾಲದಲ್ಲಿ ಈ ಸುಂದರ ದೇವಾಲಯ ನಿರ್ಮಾಣಗೊಂಡಿದೆ. ಶಾಸನದಲ್ಲಿ ಅದನ್ನು 'ದೇವಾಲಯಗಳ ಚಕ್ರವರ್ತಿ' ಎಂದು ಕರೆಯಲಾಗಿದೆ. ಈ ದೇವಾಲಯವು ವೇಸರ ಶೈಲಿಯಲ್ಲಿದೆ. ಇಲ್ಲಿಯ ಶಿಲ್ಪಕಲೆಯನ್ನು ವಾಸ್ತು ಶೈಲಿಯನ್ನು ನೋಡಿದರೆ ಪ್ರೇಕ್ಷಕರನ್ನು ಆಕರ್ಷಿಸದೆ ಇರಲಾರದು. ಕರ್ನಾಟಕದಲ್ಲಿ ಹಳೇಬೀಡಿನ ಹೊಯ್ಸಳರ ದೇವಾಲಯವನ್ನು ಬಿಟ್ಟರೆ ಇದೆ ಅತ್ಯಂತ ಸುಂದರವಾದ ದೇವಾಲಯವಾಗಿದೆ.[೩೦]

ಇಟಗಿಯು ಮೂಲತಃ ಒಂದು ಅಗ್ರಹಾರ. ಹೀಗಾಗಿ ಅಲ್ಲಿ ಅನೇಕ ದೇವಾಲಯಗಳು ನಿರ್ಮಾಣಗೊಂಡಿವೆ. ಅವುಗಳಲ್ಲಿನ ಮಹಾದೇವ ದೇವಾಲಯವನ್ನು ಆರನೆಯ ವಿಕ್ರಮಾದಿತ್ಯನ ದಂಡನಾಯಕ ಸಂಧಿ ವಿಗ್ರಹಿಯಾದ ಮಹಾದೇವನು ತನ್ನ ಹೆಸರಿನಿಂದ ಕ್ರಿ.ಶ. ೧೧೧೨ರಲ್ಲಿ ನಿರ್ಮಿಸಿದನು. ಪೂರ್ವಾಭಿಮುಖವಾಗಿರುವ ಈ ದೇವಾಲಯವು ಮಹಾಮಂಟಪ, ನವರಂಗ, ಗರ್ಭಗುಡಿ ಮತ್ತು ಅದಕ್ಕೆ ಸೇರಿದ ಒಳಕೋಣೆ (ಸುಕನಾಸಿ)ಯಿಂದ ಕೂಡಿದೆ. ಸುಮಾರು ಮೂರು ಅಡಿ ಎತ್ತರದ ಜಗಲಿಯ ಮೇಲೆ ನಿಂತಿರುವ ಈ ಗುಡಿಯ ಮಹಾಮಂಟಪವು ೬೮ ಕಂಬಗಳ ಮೇಲೆ ನಿಂತಿದೆ. ಅವುಗಲಲ್ಲಿ ೨೬ ದೊಡ್ಡ ಕಂಬಗಳು ನೆಲದ ಮೇಲೆ ನಿಂತು ಚಾವಣಿಗೆ ಪ್ರಮುಖ ಆಧಾರವನ್ನು ಒದಗಿಸಿವೆ. ಉಳಿದವು ಚಿಕ್ಕದಾಗಿವೆ. ಮಹಾಮಂಟಪವು ಸುತ್ತಲಿನ ಕಲ್ಲು ಬೆಂಚಿನ ಮೇಲೆ ನಿಂತು ಮಂಜೂರನ್ನು ಎತ್ತಿಹಿಡಿದಿವೆ.

ಮಹಾಮಂಟಪದ ಕಂಬಗಳು ದೇವಾಲಯದ ಬಹು ಸುಂದರವಾದ ರಚನೆಗಳಾಗಿವೆ. ಕೆಲವು ಕಂಬಗಳು ಚೌಕಾಕಾರದಲ್ಲಿದ್ದರೆ ಮತ್ತೆ ಕೆಲವು ದುಂಡಾಗಿವೆ. ನುಣುಪಾದ ಹಸಿರು ಕಲ್ಲಿನಿಂದಾಗಿ ಕಂಬಕ್ಕೆ ಹೊಳಪು ಬಂದಿದೆ. ಕೆಲವಂತೂ ಕನ್ನಡಿಯಂತೆ ಹೊಳೆಯುತ್ತವೆ. ಕಂಬದ ಕಾಂಡ ಭಾಗದ ಚಚ್ಚೌಕವಾಗಿರುವ ನಾಲ್ಕು ಪಾರ್ಶ್ವಗಳಲ್ಲಿ ಸುಂದರವಾದ ಶಿಲ್ಪಗಳಿವೆ. ಅದರಂತೆ ಮೇಲ್ಭಾಗದಲ್ಲೂ ಸೂಕ್ಷ್ಮರೇಖೆ ವಿನ್ಯಾಸವು ಶಿಲ್ಪಗಳ ಸೂಕ್ಷ್ಮ ದೃಷ್ಟಿಯನ್ನು ಪ್ರಕಟಿಸುತ್ತವೆ. ಕಂಬಗಳ ಈ ಅಲಂಕರಣಗಳಿಂದ ಮಹಾಮಂಟಪವು ಪ್ರವಾಸಿಗರನ್ನು ಆಶ್ಚರ್ಯಗೊಳಿಸುತ್ತದೆ. ಮಹಾಮಂಟಪದ ಮೇಲ್ಛಾವಣಿಯಲ್ಲಿ ಕಾಣುವ ಭುವನೇಶ್ವರಿ

ಮೂರ್ತಿ ವೈಶಿಷ್ಟತೆಯಿಂದ ಕೂಡಿದೆ. ಅದು ಅಷ್ಟಕೋನಾಕೃತಿಯಲ್ಲಿದೆ. ಅದರಲ್ಲಿ ಸುಳಿವು, ಕೀರ್ತಿ ಮುಖವಿದೆ. ಮಧ್ಯದಲ್ಲಿ ನಟರಾಜನ ಶಿಲ್ಪವಿದೆ. ಭುವನೇಶ್ವರಿಯಲ್ಲಿ ನಟರಾಜನನ್ನು ಕಾಣುವುದು ಅಪರೂಪ. ನಟರಾಜನ ಬಲಕ್ಕೆ ಬ್ರಹ್ಮ ಮತ್ತು ಎಡಕ್ಕೆ ವಿಷ್ಣುವಿನ ಮೂರ್ತಿಗಳನ್ನು ನಿರ್ಮಿಸಿದ್ದಾರೆ. ನವರಂಗದ ಉತ್ತರ-ದಕ್ಷಿಣಕ್ಕಿರುವ ದ್ವಾರಮಂಟಪಗಳ ಮೇಲೆಯೂ ಭುವನೇಶ್ವರಿಗಳಿವೆ. ಅವು ವರ್ತುಳಾಕಾರದಲ್ಲಿವೆ.

ನವರಂಗದ ದ್ವಾರ ಬಾಗಿಲೂ ಸುಂದರ ಕೆತ್ತನೆಯಿಂದ ಕೂಡಿದೆ. ದ್ವಾರದ ಎಡಬಲಕ್ಕೆ ಸಾಲುಸಾಲಿನ ಉದ್ದ ಪಟ್ಟಿಕೆಗಳು ಮನೋಹರವಾಗಿವೆ. ಅವುಗಳ ಕೆಲಭಾಗದಲ್ಲಿ ದ್ವಾರಪಾಲಕರಂತೆ ನೃತ್ಯ ಭಂಗಿಯಲ್ಲಿರುವ ವಿವಿಧ ವಿನ್ಯಾಸದ ಸ್ತ್ರೀಯರ ಶಿಲ್ಪಗಳಿವೆ. ಅವರು ಕೊಳಲು, ವೀಣೆ, ಮೃದಂಗ ಮೊದಲಾದ ವಾದ್ಯಗಳನ್ನು ಹಿಡಿದಿದ್ದಾರೆ. ನವರಂಗದ ಕಂಬಗಳಲ್ಲಿರುವ ಶಿಲ್ಪಾಕೃತಿಗಳೂ ನಮ್ಮನ್ನು ಬೆರಗುಗೊಳಿಸುತ್ತವೆ. ಅವುಗಳಲ್ಲಿ ಯುವತಿಯೊಬ್ಬಳ ನಗ್ನ ಶಿಲ್ಪವು ಸೇರಿದೆ. ಇದಲ್ಲದೆ ಚಾಮುಂಡಿ, ನರಸಿಂಹ, ನಟರಾಜ, ಗಣೇಶ ಶಿಲ್ಪಗಳನ್ನು ಕಂಬಗಳಲ್ಲಿ ಕೆತ್ತಲಾಗಿದೆ.

ಮಹಾದೇವ ದೇವಾಲಯವು ಗರ್ಭಗುಡಿಯಿಂದ ಮುಖಮಂಟಪದವರೆಗೆ ವ್ಯಾಪಿಸಿದ್ದು ಅದರ ಉದ್ದ ೧೨೦ ಅಡಿ, ಅಗಲ ೬೦ ಅಡಿಯಾಗಿದೆ. ಗರ್ಭಗುಡಿಯಲ್ಲಿ ಲಿಂಗವಿದೆ. ಅದಕ್ಕೆ ಎದುರಾಗಿ ಮಹಾಮಂಟಪದಲ್ಲಿ ನಂದಿ ವಿಗ್ರಹ ಇದೆ. ಈ ದೇವಾಲಯದ ಗೋಪುರವು ೪೦ ಅಡಿ ಎತ್ತರವಾಗಿದೆ. ಮೆಟ್ಟಿಲು ಮೆಟ್ಟಿಲುಗಳಾಗಿ ಮೇಲೇರಿ ಸ್ತೂಪದಲ್ಲಿ ಒಂದಾಗುವ ಶಿಖರದಲ್ಲಿ ಮೂರು ಅಂತಸ್ತುಗಳು ಸ್ಪಷ್ಟವಾಗಿ ಗೋಚರಿಸುತ್ತವೆ. ಗೋಪುರದ ಸುತ್ತಲು ಚಿಕ್ಕ ಚಿಕ್ಕ ವಿಗ್ರಹಗಳಿವೆ. ಆದರೆ ಅವುಗಳಲ್ಲಿ ಹೆಚ್ಚಿನವು ಭಗ್ನಗೊಂಡಿವೆ. ಈ ದೇವಾಲಯದ ಮುಂಭಾಗದಲ್ಲಿ ವಿಶಾಲವಾದ ಬಾವಿಯಿದೆ. ಇದರ ಸುತ್ತಲೂ ಸೋಪಾನ ಮತ್ತು ಜಗತಿಗಳನ್ನು ಕಣಶಿಲೆಯಿಂದ ನಿರ್ಮಿಸಲಾಗಿದೆ. ಈ ಜಟಿಲ ಕಲಾಕೃತಿಯನ್ನು ಖ್ಯಾತ ಕಲಾ ವಿಮರ್ಶಕರಾದ ಪರ್ಸಿ ಬ್ರೌನ್‌ರವರು "ಹಳೇಬೀಡಿನ ಹೊಯ್ಸಳೇಶ್ವರ ದೇವಾಲಯದ ನಂತರದ ಏಕೈಕ ಶ್ರೇಷ್ಠ ದೇವಾಲಯ ಇಟಗಿ ಮಹಾದೇವ ದೇವಾಲಯ" ಎಂದು ಹೇಳಿರುವುದು ಅತ್ಯಂತ ಸಮಂಜಸವಾಗಿದೆ.[೩೩]

೧೪. **ಕುಕನೂರು :**

ಕುಕನೂರು ಯಲಬುರ್ಗಾ ತಾಲ್ಲೂಕಿಗೆ ಸೇರಿದ ಅಪಾರವಾದ ಐತಿಹಾಸಿಕ ಪರಂಪರೆಯನ್ನು ಹೊಂದಿದ ಮಧ್ಯಮ ಗಾತ್ರದ ಪಟ್ಟಣವಾಗಿದೆ. ಇದು ಯಲಬುರ್ಗಿಯಿಂದ ೨೦ ಕಿ.ಮೀ. ದೂರದಲ್ಲಿದೆ. ಇತಿಹಾಸಪೂರ್ವ ಕಾಲದಿಂದಲೂ ಇದು ಮಾನವನ ನೆಲೆಯಾಗಿತ್ತು. ಮುಂದೆ ಪ್ರಾಚೀನ ಅರಸು ಮನೆತನಗಳಿಂದ ಆಳ್ವಿಕೆಗೆ ಒಳಪಟ್ಟು, ಸಾಮಾಜಿಕ, ಧಾರ್ಮಿಕ, ಆರ್ಥಿಕ ಹಾಗೂ ಸಾಂಸ್ಕೃತಿಕವಾಗಿ ಬೆಳೆದು ತನ್ನ ಶ್ರೀಮಂತಿಕೆಯನ್ನು ಪಡೆದುಕೊಂಡಿದೆ. ವಾಸ್ತುಶಿಲ್ಪ ದೃಷ್ಟಿಯಿಂದ ಎರಡು ಮಹತ್ವದ ದೇವಾಲಯಗಳು ಕುಕನೂರಿನಲ್ಲಿವೆ. ಅವುಗಳೆಂದರೆ ನವಲಿಂಗೇಶ್ವರ ಮತ್ತು ಮಹಾಮಾಯೆ ದೇವಾಲಯಗಳು.

ಕುಕನೂರನ್ನು ಸಾಂಸ್ಕೃತಿಕ ದೃಷ್ಟಿಯಿಂದ ನೋಡಿದರೆ ಇಲ್ಲಿಯ ಜನರು ಪ್ರಾಚೀನ ಸಂಸ್ಕೃತಿಯ ಆದರ್ಶ ಗುಣಗಳನ್ನು ಇಂದಿಗೂ ಪಾಲಿಸಿಕೊಂಡು ಬಂದಿದ್ದಾರೆ. ಮೊಹರಂ, ಬಕ್ರೀದ್, ರಂಜಾನ್, ದೀಪಾವಳಿ, ಮಹಾಶಿವರಾತ್ರಿ, ಪಂಚಮಿ, ಜಾತ್ರೆ, ಉತ್ಸವ, ಉರುಸ್‌ಗಳನ್ನು ಹಿಂದೂ ಮುಸ್ಲಿಮರು ಒಂದುಗೂಡಿ ಆಚರಿಸುವ ಒಂದು ಪರಿಪಾಠವನ್ನು ರೂಢಿಸಿಕೊಂಡು ಬಂದಿದ್ದಾರೆ. ಗುದ್ನೆಪ್ಪನ, ಮಹಾಮಾಯೆ ಜಾತ್ರೆಗಳು ಅತ್ಯಂತ ಐತಿಹಾಸಿಕ ಮಹತ್ವ ಪಡೆದ ಜಾತ್ರೆಗಳಾಗಿವೆ.

**ನವಲಿಂಗೇಶ್ವರ ದೇವಾಲಯ :** ನವಲಿಂಗೇಶ್ವರ ದೇವಾಲಯವು ಮಹಾಮಾಯಾ ದೇವಾಲಯಕ್ಕೆ ಹೊಂದಿಕೊಂಡಂತೆ ಹಿಂಭಾಗದಲ್ಲಿದೆ. ಇದು ಸಂಪೂರ್ಣವಾಗಿ ಕೆಂಪು ಮರುಳುಗಲ್ಲಿನಲ್ಲಿ ನಿರ್ಮಾಣಗೊಂಡ ಈ ದೇವಾಲಯ ದ್ರಾವಿಡ ಶೈಲಿಯ ಶಿಖರಗಳನ್ನು ಹೊಂದಿದೆ. ಕ್ರಿ.ಶ. ೧೦೦೫ರಲ್ಲಿ ಈಶ್ವರ ಶೆಟ್ಟಿ ಎಂಬುವನು ಈ ಎರಡು ದೇವಾಲಯಗಳನ್ನು ನಿರ್ಮಿಸಿದನೆಂದು ಕುಕನೂರಿನ ಶಾಸನದಲ್ಲಿ ಉಲ್ಲೇಖವಿದೆ.[೬೪] ನವಲಿಂಗೇಶ್ವರ ಗುಡಿಯು ಎಂಟು ಗರ್ಭಗುಡಿಗಳನ್ನು ಮತ್ತು ಒಂಭತ್ತು ಶಿವಲಿಂಗಗಳನ್ನು ಹೊಂದಿದೆ. ಇಲ್ಲಿ ಒಂಭತ್ತು ಶಿವಲಿಂಗಗಳಿರುವುದರಿಂದ ಅದನ್ನು 'ನವಲಿಂಗ' ಅಥವಾ 'ಒಂಭತ್ತೇಶ್ವರ ಗುಡಿ' ಎಂದು ಕರೆಯಲಾಗಿದೆ.[೬೫] ಇಲ್ಲಿಯ ಎಂಟೂ ಗರ್ಭಗುಡಿಗಳನ್ನು ನಾಲ್ಕು ನವರಂಗಳು ಒಟ್ಟುಗೂಡಿಸಿವೆ. ಈ ಗರ್ಭಗುಡಿಗಳಿಗೆ ಹೊಂದಿಕೊಂಡಂತೆ ಎಂಟು ಸುಕನಾಸಿಗಳಿವೆ. ಅವುಗಳಲ್ಲಿ ಎರಡು ಮಕರ ತೋರಣಗಳಿಂದ ಕೂಡಿ ಆಕರ್ಷಕವಾಗಿವೆ.

ಮೇಲ್ಭಾಗದಲ್ಲಿ ವಾದ್ಯಗಳನ್ನು ಹಿಡಿದ ಸ್ತ್ರೀ-ಪುರುಷರಿದ್ದರೆ ಕಂಬಗಳ ಪಾರ್ಶ್ವಗಳಲ್ಲಿ ರಸಿಕ ದಂಪತಿಗಳು, ರತಿ-ಮನ್ಮಥ, ನವಿಲು ವಾಹನ ಷಣ್ಮುಖ, ಗಣೇಶ ಮುಂತಾದವರ ಶಿಲ್ಪಗಳಿವೆ. ಮತ್ತೊಂದು ತೋರಣದ ಮಧ್ಯದಲ್ಲಿ ಶಿವ-ಪಾರ್ವತಿಯರಿದ್ದಾರೆ. ಪಾರ್ವತಿಯನ್ನು ಶಿವನು ತನ್ನ ಎಡಗೈಯಿಂದ ಬಳಸಿದ್ದಾನೆ. ಅವರ ಎರಡೂ ಪಾರ್ಶ್ವಗಳಲ್ಲಿ ಸಾಲಾಗಿ ಸ್ತ್ರೀಯರಿದ್ದಾರೆ. ಹೀಗೆ ಮಕರ ತೋರಣವನ್ನು ಗರ್ಭಗುಡಿಯ ಮುಂದೆ ಎರಡು ಕಂಬಗಳ ಮೇಲೆ ಅಳವಡಿಸುವ ಸಂಪ್ರದಾಯ ರಾಷ್ಟ್ರಕೂಟರ ಕಾಲದಿಂದಲೇ ಆರಂಭವಾಯಿತು. ನವಲಿಂಗೇಶ್ವರ ಗುಡಿಯ ಅಧಿಷ್ಠಾನವು ಹೆಚ್ಚು ಎತ್ತರವಾಗಿಲ್ಲ. ಆದರೆ ಅಲ್ಲಿ ಕುಮುದ, ಚೌಕಗಳುಳ್ಳ ಪಟ್ಟಿಕಾಭಾಗ, ಕಂಠ, ಕಂಪ ಭಾಗಗಳಿವೆ. ಇಲ್ಲಿ ಸಾಧಾರಣ ಎತ್ತರದ ಅರ್ಧ ಕಂಬಗಳು ಮತ್ತು ಈ ಕೋಷ್ಠಕಗಳಿವೆ. ಈ ಕೋಷ್ಠಗಳು ಬಾದಾಮಿ ಚಾಲುಕ್ಯರ ಕಾಲದ ಕೋಷ್ಠಗಳಿಗಿಂತ ಹೆಚ್ಚು ಆಳವಾಗಿವೆ. ಕೋಷ್ಠಗಳ ಪಕ್ಕದಲ್ಲಿರುವ ಅರ್ಧ ಕಂಬಗಳು ಕೀರ್ತಿಮುಖ, ಮುತ್ತಿನ ಸರ ಮತ್ತು ಲತಾ ಸುಳಿಗಳಿಂದ ಅಲಂಕೃತವಾಗಿವೆ. ಮಂಜೂರಿನ ಕೆಳಗೆ ಗೋಡೆಯ ಮೇಲ್ಭಾಗಕ್ಕೆ ಹತ್ತಿಕೊಂಡಂತೆ ಸಾಲಾಗಿರುವ ಹಂಸ ಪಕ್ಷಿಗಳನ್ನು ಕೊರೆಯಲಾಗಿದೆ. ದೇವಾಲಯದ ಸಭಾಮಂಟಪದ ಇಕ್ಕೆಲಗಳ ಮೇಲೆ ಇಳಿಜಾರಾದ ಮಾಳಿಗೆ ಇರದೆ, ಸಮಪಾತಳಿ ಮಾಳಿಗೆ ಇದೆ. ಅದರ ಮೇಲೆ ಗೋಡೆಯನ್ನು ಕಟ್ಟಲಾಗಿದೆ. ಈ ಗೋಡೆಯು ಮಂಜೂರಿನ ಮೇಲ್ಗಡೆ ರಚಿತವಾಗಿದೆ. ಇಲ್ಲಿಯ ಎಂಟು ಗರ್ಭಗುಡಿಯ ಮೇಲೂ ಎಂಟು ದ್ರಾವಿಡ ಶೈಲಿಯ ಗೋಪುರಗಳಿವೆ.

ಒಂಭತ್ತನೆಯ ಲಿಂಗಕ್ಕೆ ಗರ್ಭಗುಡಿಯೂ ಇಲ್ಲ. ಶಿಖರವೂ ಇಲ್ಲ ಇಲ್ಲಿಯ ಗೋಪುರಗಳಲ್ಲಿ ಕೀರ್ತಿಮುಖವಿದೆ. ಈ ದೇವಾಲಯವು ಕೆಂಪು ಉಸುಕು ಕಲ್ಲಿನಲ್ಲಿ ರಚನೆಗೊಂಡಿದೆ.

**ಮಹಾಮಾಯಿ ದೇವಾಲಯ :** ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಬಹಳಷ್ಟು ಪ್ರಸಿದ್ಧಿಯನ್ನು ಹಾಗೂ ಅತ್ಯಂತ ಪ್ರೇಕ್ಷಕರ ಆಕರ್ಷಣೀಯ ಮನಮೋಹಕ ಕಲಾ ಪ್ರೌಢಿಮೆಯನ್ನು ಹೊಂದಿರುವ ದೇವಾಲಯವೇ ಮಹಾಮಾಯದೇವಾಲಯ. ಈ ದೇವಾಲಯ ಊರಿನ ಮಧ್ಯದಲ್ಲಿದೆ. ಈ ದೇವಾಲಯವು ಗರ್ಭಗುಡಿಯ ಸುಕನಾಸಿ, ಪ್ರದಕ್ಷಿಣಾಭಿಮುಖವಾಗಿರುವ ಇದರ ನವರಂಗವನ್ನು ಮತ್ತು ನಾಟ್ಯಶಾಲೆಯನ್ನು ಪ್ರವೇಶಿಸಲು ಮೂರು ದ್ವಾರಗಳಿವೆ. ಈ ದೇವಾಲಯದ ಸುತ್ತಲೂ ವಿಸ್ತಾರವಾದ ಪ್ರಾಕಾರವಿದೆ.

ಇಡೀ ದೇವಾಲಯ ಸಂಕೀರ್ಣ ವಿವಿಧ ಅರಸು ಮನೆತನಗಳಲ್ಲಿ ನಿರ್ಮಾಣಗೊಂಡಿದೆ. ಉತ್ತರ ಹಾಗೂ ದಕ್ಷಿಣ ದ್ವಾರ ಮಂಟಪಗಳು ಹಾಗೂ ಎರಡು ಸಣ್ಣ ಗುಡಿಗಳು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಿರ್ಮಾಣಗೊಂಡಿವೆ. ಮುಖ್ಯದ್ವಾರ ಮಂಟಪವು ವಿಜಯನಗರ ಕಾಲದ ರಚನೆಯಾದರೆ, ಪ್ರಧಾನ ದೇವಾಲಯವು ವಿಜಯನಗರ ಹಾಗೂ ವಿಜಯನಗರೋತ್ತರ ಕಾಲದಲ್ಲಿ ರಚನೆಗೊಂಡಿದೆ. ಕಲ್ಯಾಣ ಚಾಲುಕ್ಯರ ಕಾಲದ ಶಾಸನಗಳಲ್ಲಿ ಈ ದೇವಿಗೆ ಚೇಷ್ಮಾದೇವಿ ಎಂತಲೇ ಕರೆಯಲಾಗಿದೆ. ದ್ವಾರಮಂಟಪದ ಬದಿಯಲ್ಲಿಯ ಪ್ರಾಕಾರ ಗೋಡೆಯನ್ನು ದೊಡ್ಡ ಅಳತೆ ಕಲ್ಲುಗಳಿಂದ ಕಟ್ಟಲಾಗಿದೆ. ಅದರ ಮೇಲಿನ ಬಾರೀಕಂಗುರಗಳು ನಂತರದಲ್ಲಿ ರಚನೆಗಳಾಗಿವೆ. ಶಾಸನಗಳಲ್ಲಿ ಚೇಷ್ಮಾದೇವಿ ಎಂದು ಕರೆಯಿಸಿಕೊಂಡಿರುವ ಅವಳು ಆ ಕಾಲದ ಪ್ರಮುಖ ಶಕ್ತಿ ದೇವತೆಯಾಗಿದ್ದಳು. ಯಲಬುರ್ಗಿಯ ಸಿಂದರ ರಾಜಗುರುಗಳಾಗಿದ್ದ ಕಳೇಶ್ವರ ಪಂಡಿತರು ಈ ಶಕ್ತಿ ಪೀಠದ ಸ್ಥಾನಪತಿಗಳಾಗಿದ್ದರು. ಈ ಚೇಷ್ಮಾದೇವಿಯ ದ್ವಾರಪಾಲಕರು ವಿಷ್ಣುವಿನ ಲಾಂಛನಗಳಾದ ಶಂಖ, ಚಕ್ರ, ಗದೆಗಳನ್ನು ಹಿಡಿದಿರುವುದು ಆಶ್ಚರ್ಯವೆನಿಸಿದೆ. ಗರ್ಭಗುಡಿಯ ಮಧ್ಯದಲ್ಲಿ ಶಿವನಿದ್ದರೆ ಆತನ ಬಲದಲ್ಲಿ ಮಹಾಮಾಯ ಮತ್ತು ಪಾರ್ವತಿಯ ಮೂರ್ತಿಗಳಿವೆ. ಕರಿಶಿಲೆಯಲ್ಲಿರುವ ಮಹಾಮಾಯೆ ಗುಡಿಯ ಮತ್ತೊಂದು ಆಶ್ಚರ್ಯಚಕಿತವೆಂದರೆ ಗರ್ಭಗುಡಿಯ ಸುತ್ತಲೂ ಪ್ರದಕ್ಷಿಣ ಪಥವಿರುವುದು ಕಂಡುಬರುತ್ತದೆ.

**೧೫. ಕಲ್ಲೂರು :**

ಈ ಗ್ರಾಮವು ಯಲಬುರ್ಗಾ ತಾಲೂಕಿನಿಂದ ೮ ಕಿ.ಮೀ. ದೂರದಲ್ಲಿದೆ. ಇಲ್ಲಿನ ಕಲ್ಲಿನಾಥೇಶ್ವರ ದೇವಾಲಯವು ಪ್ರಮುಖವಾಗಿದೆ. ಶಾಸನಗಳಲ್ಲಿ ಇದನ್ನು ಕಲ್ಲಿದೇವ, ಕಳೇಶ್ವರ, ಕಲ್ಲಯ್ಯ ಎಂದು ಕರೆಯಲಾಗಿದೆ. ಕೊಪ್ಪಳ ಜಿಲ್ಲೆಯ ಐತಿಹಾಸಿಕ ದೇವಾಲಯಗಳಲ್ಲಿ ಹಾಗೂ ಸಾಂಸ್ಕೃತಿಕ ಪರಂಪರೆಯಲ್ಲಿ ಕಲ್ಲೂರು ಮಹತ್ವದ ಸ್ಥಾನವನ್ನು ಅಲಂಕರಿಸಿಕೊಂಡಿದೆ.

**ಕಲ್ಲಿನಾಥೇಶ್ವರ ದೇವಾಲಯ :** ಕಲ್ಲಿನಾಥೇಶ್ವರ ದೇವಾಲಯವು ಗ್ರಾಮದ ಮಧ್ಯದಲ್ಲಿದ್ದು ಇದು ಪೂರ್ವಾಭಿಮುಖವಾಗಿದೆ. ಗರ್ಭಗುಡಿ, ಅಂತರಾಳ, ಸಭಾಮಂಟಪ ಮತ್ತು ವಿಶಾಲವಾದ

ಕಲ್ಯಾಣಮಂಟಪಗಳು, ಮುಂದೆ ಪ್ರತ್ಯೇಕ ನಂದಿ ಮಂಟಪವನ್ನು ಹೊಂದಿದೆ. ಸುತ್ತಲೂ ಪ್ರಾಕಾರ ಮತ್ತು ಅದಕ್ಕೆ ಮುಂಭಾಗದಲ್ಲಿ ದೊಡ್ಡ ದ್ವಾರಮಂಟಪ ಅದರ ಮೇಲೆ ಎತ್ತರವಾದ ಗೋಪುರವಿದೆ. ಈ ದೇವಾಲಯವು ಎರಡು ಹಂತಗಳಲ್ಲಿ ನಿರ್ಮಾಣಗೊಂಡಿದೆ. ಗರ್ಭಗುಡಿ, ಅಂತರಾಳ ಮತ್ತು ಸಭಾಮಂಪಟ ಹಾಗೂ ದಕ್ಷಿಣ ಪ್ರಾಕಾರದ ಕೆಲವು ಮಂಪಟಗಳು, ಎತ್ತರ ಪ್ರಾಕಾರಕ್ಕೆ ಹೊಂದಿಕೊಂಡಿರುವ ಒಂದು ಸಣ್ಣ ಸ್ವತಂತ್ರ ಮಂಟಪ ಕಲ್ಯಾಣ ಚಾಲುಕ್ಯರ ಕಾಲದವು. ಕಲ್ಯಾಣ ಮಂಟಪದಲ್ಲಿಯ ಮಧ್ಯದ ನಾಲ್ಕು ಕಂಬಗಳು ಕೂಡ ಇದೇ ಕಾಲಕ್ಕೆ ಸೇರಿವೆ. ಇನ್ನು ಕಲ್ಯಾಣ ಮಂಟಪ, ನಂದಿ ಮಂಟಪ ಹಾಗೂ ದ್ವಾರಮಂಟಪ ಅದರ ಮೇಲಿನ ಗೋಪುರಗಳು ವಿಜಯನಗರ ಕಾಲದವು.[೩೭]

ಕಲ್ಯಾಣ ಮಂಟಪವು ವಿಶಾಲವಾಗಿದೆ. ಇಲ್ಲಿ ಇಪ್ಪತ್ತು ಕಂಬಗಳು, ಹದಿನಾಲ್ಕು ಗೋಡೆಗಂಬಗಳು ಇವೆ. ಮುಂದಿನ ಸಾಲಿನ ಕಂಬಗಳು ವಿಜಯನಗರದ ವಿಶಿಷ್ಠ ಶೈಲಿಯನ್ನು ಹೊಂದಿವೆ. ಚೌಕ ಘನ ಕಾಂಡಗಳಿಗೆ ಹೊಂದಿಕೊಡಂತೆ ಹಿಂಗಾಲಿನಿಂದ ತುಳಿದು ನಿಂತಿರುವ ಆನೆಗಳ ಶಿಲ್ಪವನ್ನು ಹೊಂದಿವೆ. ಮಧ್ಯದ ನಾಲ್ಕು ಕಂಬಗಳು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಿರ್ಮಿತಿಗೊಂಡಿವೆ. ತಿಳಿ ಹಸಿರು ಶಿಲೆಗಳು ವೃತ್ತಾಕಾರದಲ್ಲಿವೆ. ಇವುಗಳಲ್ಲಿ ಪೀಠ (ವಿಜಯನಗರ) ಕಾಂಡ, ಪದ್ಮ, ಕುಂಭ, ಫಲಕ, ಭಾಗಗಳಿವೆ. ಉಳಿದಂತೆ ಕಂಬಗಳ ಮೇಲೆ ಮಧ್ಯ ಹಾಗೂ ಕೆಳಗೆ ಅಸಮಚೌಕ ಭಾಗಗಳನ್ನು ಹೊಂದಿವೆ. ಈ ಚೌಕ ಭಾಗಗಳಲ್ಲಿ ನೃತ್ಯಗಾರ್ತಿಯರ, ನಂದಿ, ಗಿಳಿ, ಸಿಂಹ, ಕುಂಭ, ಗಣೇಶ, ಲಿಂಗ, ಹಂಸ, ಶಂಖ, ಕತ್ತೆ ವಾದ್ಯಗಾರ ಮತ್ತು ಕೆಲವು ನಾಯಕ ಮತ್ತಿತರ ಶಿಲ್ಪಗಳನ್ನು ಕೆತ್ತಲಾಗಿದೆ. ಇಲ್ಲಿನ ಒಂದು ಕಂಬದಲ್ಲಿ ಇರುವ ಶಾಸನವೊಂದು ಕ್ರಿ.ಶ. ೧೫೫೦ರಲ್ಲಿ ಈ ಭೋಗ ಮಂಟಪವನ್ನು ನಿರ್ಮಿಸಿದರ ಬಗ್ಗೆ ವಿವರಿಸುತ್ತದೆ.

ಇಲ್ಲಿ ಮಧ್ಯದ ನಾಲ್ಕು ಕಂಬಗಳನ್ನು ಬಿಟ್ಟು ಉಳಿದ ಎಲ್ಲ ಕಂಬಗಳಿಗೂ ಬಣ್ಣ ಹಚ್ಚಲಾಗಿದೆ. ಸಭಾಮಂಟಪ, ಅಂತರಾಳ ಮತ್ತು ಗರ್ಭಗುಡಿಗಳು ಸರಳವಾಗಿವೆ. ಸಭಾಮಂಟಪದ ಮಧ್ಯದಲ್ಲಿ ನಾಲ್ಕು ಕಂಬಗಳನ್ನು ಹೊಂದಿವೆ. ಮಧ್ಯದ ಛತ್ತಿನಲ್ಲಿ ಕಮಲಾಕೃತಿ ಇದೆ. ಕಲ್ಯಾಣ ಮಂಟಪದ ಅಧಿಷ್ಠಾನವು ಉಪಾನ, ಜಗತಿ, ಕುಮುದ ಮತ್ತು ಕಪೋತಗಳನ್ನು ಒಳಗೊಂಡಿದೆ. ಕಪೋತದಲ್ಲಿ ಕೀರ್ತಿ ಮುಖಗಳ ಅಲಂಕರಣೆ ಇದೆ. ಗರ್ಭಗುಡಿಯ ಮೇಲೆ ಕದಂಬನಾಗರ ಶೈಲಿಯ ಶಿಖರವಿದೆ. ನಂದಿ ಮಂಟಪವು ವಿಜಯನಗರ ಶೈಲಿಯ ಪ್ರತೀಕವಾಗಿದೆ. ಅದರ ಮಂಚ ಬಂಧ ಅಧಿಷ್ಠಾನದಲ್ಲಿ ಆನೆಗಳ ಸಾಲು ಶಿಲ್ಪಗಳಿವೆ. ನಾಲ್ಕು ಕಂಬಗಳ ಮೇಲೆ ಪುಷ್ಪ ಬೋದಿಕೆ ಇದೆ. ಮೇಲೆ ಏಕತಲ ವಿಮಾನ ಮಾದರಿ ಶಿಖರ ಇದೆ. ಎಡಬದಿಯ ಪ್ರಾಕಾರ ಮಂಟಪಗಳಲ್ಲಿ ವೀರಭದ್ರ, ಶಿವಲಿಂಗ, ಗಣೇಶ ಶಿಲ್ಪಗಳಿವೆ. ದ್ವಾರ ಮಂಟಪವು ಕಣಶಿಲೆಯಿಂದ ಕಟ್ಟಲ್ಪಟ್ಟಿದೆ. ಮೇಲೆ ಇಟ್ಟಿಗೆ, ಗಾರೆಯ ಗೋಪುರವಿದೆ. ಗೋಪುರವು ಮೂರು ತಲದಲ್ಲಿದ್ದು ಅಲ್ಲಿಯ ದೇವಿ ಕೋಷ್ಠಗಳಲ್ಲಿ ಉಮಾ ಮಹೇಶ್ವರ (ಮಧ್ಯ) ಭೈರವ, ಶಿವ ಪಾರ್ವತಿ, ಕಾಳಿಂಗ, ಮರ್ಧನ ಕೃಷ್ಣ (ಬಲಕ್ಕೆ) ಎರಡನೆಯ ತಲದಲ್ಲಿ ಕಂಬಗಳ, ಮೂರರಲ್ಲಿ ಕೀರ್ತಿ

ಮುಖಗಳ ನಾಲ್ಕರಲ್ಲಿ ಆನೆ, ಅಶ್ವಸವಾರರ ಶಿಲ್ಪಗಳಿವೆ. ದೇವಾಲಯದ ಹಿಂಬದಿಯಲ್ಲಿ ಕ್ರಮವಾಗಿ ನಾಯಕ ಅರಸರ, ದೇವಾನು ದೇವತೆಗಳ, ಯತಿಗಳ ಶಿಲ್ಪಗಳಿವೆ. ಮೇಲೆ ಶಿಲಾ ಶಿಖರವಿದೆ. ಹೀಗೆಯೇ ಮಹಾಮಂಟಪದ ಕೈಪಿಡಿ ಗೋಡೆಯಲ್ಲಿ ದ್ರಾವಿಡ ಮಾದರಿಯ ಶಿಖರ ಪಟ್ಟಿಕೆಗಳಿಂದ ಕೂಡಿದ ಗೂಡುಗಳಲ್ಲಿ ಮಧ್ಯ ಶಿವಪಾರ್ವತಿ ಇಕ್ಕೆಲಗಳಲ್ಲಿ ಶಿವನ ಭಂಗಿ ಮತ್ತು ಇನ್ನಿತರ ಶಿಲ್ಪಗಳಿವೆ.

**ಈ ಗ್ರಾಮದ ಆಚರಣೆಗಳ ವೈಶಿಷ್ಟ್ಯಗಳು :** ಕಲ್ಲೂರು ಗ್ರಾಮದ ವಾರ್ಷಿಕ ಆಚರಣೆಗಳಲ್ಲಿ ಜಾತ್ರೆಗಳು, ಉತ್ಸವಗಳು, ಕಾರ್ತಿಕದ ದೀಪೋತ್ಸವ ಮುಖ್ಯವಾಗಿವೆ. ಐದು ದಿನಗಳ ಕಾರ್ತಿಕ ದೀಪೋತ್ಸವಕ್ಕೆ ಬಿಜಾಪುರ, ಬೆಳಗಾವಿ, ಹಾವೇರಿ, ಧಾರವಾಡದ ಜನರು ವಿವಿಧ ಜಿಲ್ಲೆಗಳಿಂದ ಆಗಮಿಸುತ್ತಾರೆ. ಅಂದು ಪಲ್ಲಕ್ಕಿ ಉತ್ಸವ ಜರುಗುತ್ತದೆ. ದೇವಸ್ಥಾನವನ್ನು ದೀಪಗಳಿಂದ ಅಲಂಕರಿಸಲಾಗುತ್ತದೆ. ವಿಶೇಷವೆಂದರೆ ಈ ಊರಿನ ಕುಂಬಾರರ ತಯ್ಯಾರು ಮಾಡಿದ ಮದ್ದನ್ನು ಸುಡುವ ಕಾರ್ಯಕ್ರಮ. ದೇಗುಲದ ಒಳ ಆವರಣದ ಅಂಗಳದಲ್ಲಿ ತಗ್ಗು ತೆಗೆದು ಉಗಿದು ಇಡೀ ರಾತ್ರಿ ಮದ್ದನ್ನು ಸುಡುತ್ತಾರೆ. ಬಣ್ಣ ಬಣ್ಣ ಚಿತ್ತಾರಗಳನ್ನು ಆಕಾಶದಲ್ಲಿ ಬಿಡಿಸುವ ಮದ್ದಿನ ವೈಭವವನ್ನು ನೋಡಲು ಸಹಸ್ರಾರು ಜನರು ಸೇರಿರುತ್ತಾರೆ.

ಶ್ರಾವಣದಲ್ಲಿ ಪಲ್ಲಕ್ಕಿ ಉತ್ಸವ ನಡೆಯುತ್ತದೆ. ಅಂದು ಪಾಲಕಿಯಲ್ಲಿ ದೇವರನ್ನಿಟ್ಟು ಪ್ರದಕ್ಷಿಣೆಗೈಯುತ್ತಾರೆ. ನಂದಿ ವಿಗ್ರಹದ ಮೆರವಣಿಗೆಯಲ್ಲಿ ಸ್ವಾಮಿಗಳನ್ನು ಕರೆತಂದು ಜಂಗಮನಿಗೆ 'ಗಣಾರಾಧನೆ' ಮಾಡುತ್ತಾರೆ. ಡೊಳ್ಳಿನ ಮೇಳ ಇರುತ್ತದೆ. ಈ ದೇಗುಲದ ಹಲವು ವಿಶೇಷ ಕ್ರಮಗಳು ಗಮನಾರ್ಹವಾಗಿವೆ. ಇಲ್ಲಿ ಒಂದಲ್ಲ 'ಜೋಡುಗಾಯಿ' (ಎರಡು ತೆಂಗಿನಕಾಯಿ) ಒಡೆಸಬೇಕು. ಅದಕ್ಕೆ ಕಾರಣವಿದೆ. ಒಂದು ಸಲ ಒಬ್ಬ ಬಡವ ತಾನು ಒಂದೇ ಕಾಯಿ ಒಡೆಸುವುದಾಗಿ ಹಟ ಹಿಡಿದ. ಪೂಜಾರಿಯು ಕಾಯಿ ಒಡೆದಾಗ ಅದು ನಾಲ್ಕು ಹೋಳಾಯಿತು.[೬೯] (ಅದರ ಫೋಟೋ ಇಂದಿಗೂ ಇದೆ.) ದೇವರಿಗೆ ಬಜಾರಿನಲ್ಲಿ ತಂದ ಹೂಮಾಲೆ ಸಲ್ಲುವುದಿಲ್ಲ. ಜೀರರಿಗೆ ಹೇಳಿದರೆ ಅವರು ಮಡಿಯಿಂದ ಕೊಂಡು ತಂದು ಹೂಮಾಲೆ ಹಾಕುತ್ತಾರೆ. ದೇವರಿಗೆ ನೇರವಾಗಿ ಎಡೆ ನೀಡುವಂತಿಲ್ಲ. ಎಡೆಗೆ ಬೇಕಾದ ಸಾಮಾನುಗಳು ಜೀರರಿಗೆ ಕೊಡಬೇಕು. ನಂತರ ನೈವೇದ್ಯ ದೇವರಿಗೆ ಅರ್ಪಿಸುತ್ತಾರೆ. ಈ ದೇವಾಲಯದಲ್ಲಿ ಸಾಮೂಹಿಕ ವಿವಾಹಗಳು ಇಂದಿಗೂ ನಡೆಯುತ್ತವೆ. ಈ ಎಲ್ಲಾ ಹಿನ್ನೆಲೆಗಳಲ್ಲಿ ಕಲ್ಲೂರು ಗ್ರಾಮವು ಸಾಂಸ್ಕೃತಿಕವಾಗಿ ತನ್ನ ಪರಂಪರೆಯನ್ನು ಉಳಿಸಿಕೊಂಡು ಬಂದಿದೆ ಎಂದು ಹೇಳಬಹುದಾಗಿದೆ.

**೧೬. ಮುಧೋಳ :**

ಯಲಬುರ್ಗಾ ತಾಲೂಕಿನ ಮುಧೋಳವು ಐತಿಹಾಸಿಕವಾಗಿ ಹಾಗೂ ಸಾಂಸ್ಕೃತಿಕವಾಗಿ ವೈಶಿಷ್ಟ್ಯತೆಯನ್ನು ಪಡೆದುಕೊಂಡಿದೆ. ಇಲ್ಲಿ ಅನೇಕ ಪ್ರಾಚೀನ ಸ್ಮಾರಕಗಳನ್ನೊಳಗೊಂಡಿದೆ. ಅವುಗಳಲ್ಲಿ ಪ್ರಮುಖವೆಂದರೆ, ಮಲ್ಲಿಕಾರ್ಜುನ, ತ್ರಿಲಂಗೇಶ್ವರ ದೇವಾಲಯಗಳು, ಈ ಸ್ಥಳವು ಯಲಬುರ್ಗಿಯಿಂದ ೮ ಕಿ.ಮೀ. ದೂರದಲ್ಲಿದೆ.

**ಮಲ್ಲಿಕಾರ್ಜುನ ದೇವಾಲಯ :** ಗ್ರಾಮದ ದಕ್ಷಿಣಕ್ಕೆ ಮಲ್ಲಿಕಾರ್ಜುನ ದೇವಾಲಯವಿದೆ. ಕೆಂಪು ಮರಳುಗಲ್ಲಿನ ಈ ರಚನೆಯು ಪೂರ್ವಾಭಿಮುಖವಾಗಿದೆ. ಕ್ರಿ.ಶ. ೧೧ನೆಯ ಶತಮಾನದ ಚಾಲುಕ್ಯ ಅರಸ ೨ನೆಯ ತೈಲಪನ ಶಾಸನದಲ್ಲಿ ಬೊಮ್ಮಲದೇವಿ ಹರಿಹರರಿಗಾಗಿ ಈ ದೇವಾಲಯವನ್ನು ಕಟ್ಟಿಸಿದ ಬಗ್ಗೆ ಉಲ್ಲೇಖವಿದೆ. ಇದು ದ್ವಿಕೂಟ ದೇವಾಲಯವಾಗಿದೆ. ಎರಡು ಗರ್ಭಗುಡಿ (ಒಂದರ ಪಕ್ಕ ಒಂದು), ಎರಡು ಅಂತರಾಳ, ಕಂಬಗಳ ಮಂಟಪಗಳನ್ನು ಹೊಂದಿದೆ. ಗರ್ಭಗುಡಿಗಳ ಮುಂದೆ ನಾಲ್ಕು ಕಂಬಗಳಿದ್ದು, ವೃತ್ತಾಕಾರದಲ್ಲಿವೆ. ಅವು ಪೀಠ, ಚೌಕಕಾಂಡ, ಪದ್ಮಭಾಗ, ಕುಂಭ, ಇದಚೆ, ಫಲಕಗಳನ್ನು ಹೊಂದಿವೆ. ಕಿರಿದಾಗಿರುವ ಮುಂದಿನ ಸಾಲಿನ ಕಂಬಗಳಲ್ಲಿ ಎಲೆಯಾಕೃತಿಗಳನ್ನು ಕೆತ್ತಲಾಗಿದೆ. ಪಶ್ಚಿಮದ ಗೋಡೆಯಲ್ಲಿ ನಾಲ್ಕು ದೇವಕೋಷ್ಠಗಳಿದ್ದು ಕೆಳಗೆ ಪದ್ಮಾಧಾರ ಅಲಂಕರಣ ಹೊಂದಿವೆ. ಉತ್ತರಾಂಗದಲ್ಲಿ ಮೂರು ದ್ರಾವಿಡ ಮಾದರಿ ದ್ವಾರಗಳಿವೆ.

ಅಂತರಾಳದ ದ್ವಾರಗಳು ಸರಳವಾಗಿವೆ. ವಿಶಾಲವಾದ ತೆರೆದ ಸಭಾಮಂಟಪದಲ್ಲಿ ಮೂರು ಪ್ರಾಕಾರ ಕಂಬಗಳನ್ನು ನಿಲ್ಲಿಸಲಾಗಿದೆ. ಎರಡೂ ಅಂತರಾಳದ ಮುಂದಿರುವ ೮ ಕಂಬಗಳು ಕೆಳಗೆ ಅಸಮ ಚೌಕಾಕಾರ ಮೇಲೆ ವೃತ್ತಾಕಾರದಲ್ಲಿವೆ. ಈ ವೃತ್ತಾಕಾರವು ಕೆಳಗೆ ಗಂಟೆಯಾಕಾರ, ಮೇಲೆ ಕುಂಭಾಕಾರದಲ್ಲಿದೆ. ಮೇಲ್ಭಾಗ ವೃತ್ತಾಕಾರದ ಮುಚ್ಚಳ, ಚೌಕಾಕಾರದ ಫಲಕ, ಬೋದಿಕೆಗಳಿಂದ ಕೂಡಿವೆ. ಮುಂಭಾಗದ ಆರು ಕಂಬಗಳು ಇದೇ ಮಾದರಿಯಲ್ಲಿದ್ದು, ವೃತ್ತಾಕಾರದಲ್ಲಿರುವ ಪಟ್ಟಿಕೆಗಳು ಎದ್ದು ಕಾಣುತ್ತವೆ. ಎರಡೂ ಗರ್ಭಗುಡಿಗಳನ್ನು ಪ್ರತ್ಯೇಕಿಸುವ ಮಧ್ಯದ ಎರಡು ಕಂಬಗಳ ಕೆಳಗೆ ಚೌಕಾಕಾರದ ಮೇಲೆ ಹದಿನಾರು ಭಾಗದಲ್ಲಿವೆ. ಉತ್ತರಾಂಗದಲ್ಲಿ ದ್ರಾವಿಡ ಶಿಖರ ಮಾದರಿಗಳಿವೆ. ಎರಡು ಗರ್ಭಗುಡಿಗಳಲ್ಲಿ ಮೂಲ ಲಿಂಗಗಳು ಅಥವಾ ವಿಗ್ರಹಗಳು ಕಾಣಬರುವುದಿಲ್ಲ.[೨೦]

ಅಧಿಷ್ಠಾನವು ಉಪಾನ, ಪದ್ಮ, ಜಗತಿ, ದ್ವಿಪಟ್ಟ, ಕುಮುದ ಪದ್ಮಗಳಿಂದ ಕೂಡಿದೆ. ಗೋಡೆಯ ಮೇಲೆ ಅಲ್ಲಲ್ಲಿ ಅರ್ಧಗಂಬಗಳು ಫಲಕ ಬೋದಿಕೆಗಳನ್ನು ಹೊಂದಿವೆ. ಕೆಂಪು ಮರಳು ಶೈಲಿಯಲ್ಲಿ ನಿರ್ಮಾಣವಾದ ಹೊರಭಾಗದ ಗೋಡೆಯ ಅಧಿಷ್ಠಾನ ಭಾಗವು ವಿಭಜನೆಗೊಂಡಿದೆ. ಮುಂದಿನ ಮಂಟಪದ ಗೋಡೆ ಈ ತೆರನಾಗಿರದೆ ಸರಳವಾಗಿದೆ. ಪ್ರಸ್ತರದ ಮೇಲ್ಭಾಗವು ನಾಶಗೊಂಡಿದೆ.

**ತ್ರಿಲಿಂಗೇಶ್ವರ ದೇವಾಲಯ :** ತ್ರಿಲಿಂಗೇಶ್ವರ ದೇವಾಲಯ ಗ್ರಾಮದ ಪಶ್ಚಿಮ ಭಾಗದಲ್ಲಿದ್ದು ಪೂರ್ವಾಭಿಮುಖಿಯಾಗಿದೆ. ಶಿಖರವು ದುರಸ್ತಿಗೊಂಡಿದ್ದು ದೇವಾಲಯಕ್ಕೆ ಸುಣ್ಣವನ್ನು ಬಳಿದಿರುವುದರಿಂದ ಯಾವ ಮಾದರಿಯ ಶೈಲಿಯನ್ನು ಹೊಂದಿದೆ ಎಂಬುದು ಸ್ಪಷ್ಟವಾಗುವುದಿಲ್ಲ. ಈ ದೇವಾಲಯದ ಆವರಣದಲ್ಲಿರುವ ಕ್ರಿ.ಶ. ೧೧೫೪ರ ಶಾಸನದಲ್ಲಿ ಇದನ್ನು ಗವರೇಶ್ವರ ದೇವಾಲಯವೆಂದು ಕರೆಯಲಾಗಿದೆ. ತ್ರಿಲೋಕ ಮಲ್ಲನು ಆಳುತ್ತಿದ್ದಾಗ ಮುದುವೊಳಲು ಸಾವಿರ ವಿಶೇಷ ಮಹಾಜನರು ಶ್ರೀ ಸ್ವಯಂಭು ಜಡೆಯ ಶಂಕರದೇವರ ತಾಪಾರಾಧಿಕರಾಗಿದ್ದರೆಂದು ಶಾಸನ ವರ್ಣಿಸುತ್ತದೆ.[೨೧] ಅವರ ಅನುಮತಿ ಪಡೆದು ಐನೂರು ಜನರ ಅಗ್ರಹಾರ ಮುದುವೊಳಲಿನಲ್ಲಿ ಗವರೇಶ್ವರ ದೇವಾಲಯವನ್ನು ನಿರ್ಮಿಸುತ್ತಾರೆ.

ತ್ರಿಕೂಟ ದೇವಾಲಯವಾಗಿರುವ ಇದು ಮೂರು ಗರ್ಭಗುಡಿಗಳನ್ನು ಅವುಗಳ ಮುಂದೆ ತೆರೆದ ಅಂತರಾಳಗಳನ್ನು, ಒಂದು ಸಾಮಾನ್ಯ ಸಭಾಮಂಟಪ ಹಾಗೂ ತೆರೆದ ಮಹಾಮಂಟಪಗಳನ್ನು ಹೊಂದಿದೆ. ಮಹಾಮಂಟಪವು ದುರಸ್ತಿಗೊಂಡಿದ್ದು, ಅಲ್ಲಿ ಹದಿನಾರು ಕಂಬಗಳಿವೆ. ಇದು ಮೂರು ಬದಿಗೆ ಪ್ರವೇಶಗಳನ್ನು ಹೊಂದಿದೆ. ಮಧ್ಯದಲ್ಲಿಯ ಕಂಬಗಳು, ಕೆಳಗೆ-ಮೇಲೆ ಚೌಕ ಭಾಗಗಳನ್ನು ಅಷ್ಟಾದಶ ಮುಖಗಳ ಅಷ್ಟ ಪಟ್ಟಿಕೆಗಳನ್ನು ಕುಂಭ, ಫಲಕ ಮತ್ತು ಇದಚೆಗಳನ್ನು ಹೊಂದಿವೆ. ಪೂರ್ವಬದಿಯ ಕಂಬಗಳಲ್ಲಿ ಅಷ್ಟದಿಕ್ಪಾಲಕ ನೃತ್ಯಗಾರ ಮುಂತಾದ ಶಿಲ್ಪಗಳಿವೆ. ಸಭಾಮಂಟಪದ ದ್ವಾರ ಬಂಧವು ರತ್ನಾಶಾಖೆ, ಸ್ತಂಭಶಾಖೆ, ಪುಷ್ಪಶಾಖೆಗಳನ್ನು ಹೊಂದಿದೆ. ಬಾಗಿಲ ಬದಿಯಲ್ಲಿ ಪೂರ್ಣ ಕುಂಭಗಳ ಅಲಂಕರಣಗಳಿವೆ. ಉತ್ತರಾಂಗವು ಗೂಡುಗಳಿಂದ ಕೂಡಿದ್ದಾಗಿದೆ. ಸಭಾಮಂಟಪದಲ್ಲಿ ನಾಲ್ಕು ಕಂಬಗಳಿವೆ. ಮೂರು ಗರ್ಭಗುಡಿಗೂ ತೆರೆದ ಅಂತರಾಳಗಳಿವೆ. ಗರ್ಭಗುಡಿಗಳ ದ್ವಾರ ಬಂಧಗಳು ಸರಳವಾಗಿದ್ದು. ಐದು ಶಾಖೆಗಳನ್ನು ಹೊಂದಿವೆ. ಉತ್ತರದ ಗರ್ಭಗುಡಿಯನ್ನು ಹೊರತುಪಡಿಸಿ ಉಳಿದವುಗಳು ಗಜಲಕ್ಷ್ಮಿಯ ಲಲಾಟಬಿಂಬವನ್ನು ಹೊಂದಿವೆ. ಮೂರು ಗರ್ಭಗುಡಿಗಳಲ್ಲಿ ಶಿವಲಿಂಗಗಳಿವೆ.[೪೨] ಈ ದೇವಾಲಯದ ಹೊರಗೋಡೆಯ ಅಧಿಷ್ಠಾನ ಭಾಗದಲ್ಲಿ ಅರ್ಧಗಂಬಗಳಿಂದ ಅಲಂಕರಿಸಲಾಗಿದೆ. ಗೋಡೆಯನು ಜೋಡಿ ಅರ್ಧಗಂಬಗಳ ಮೇಲೆ ದ್ರಾವಿಡ ಮಾದರಿಯ ಶಿಖರ ಪಟ್ಟಿಕೆಗಳಿವೆ. ಪ್ರತಿಬದಿಯಲ್ಲಿ ದ್ವಿಅರ್ಧಕಂಬ ದ್ರಾವಿಡ ಶಿಖರ ಮಾದರಿಗಳ ಅಲಂಕರಣಗಳಿವೆ. ಈ ಗರ್ಭಗುಡಿಯ ಅಂತರಾಳದ ಭಿತ್ತಿಯಲ್ಲಿ ಏಕಕಂಬ ನಾಗರಶಿಖರ ಮಾದರಿ ಇದೆ.

**ಆರ್ಥಿಕ ವ್ಯವಸ್ಥೆ :** ಪ್ರಾಚೀನ ಇತಿಹಾಸ ಕಾಲದಲಿಂದಲೂ ಆರ್ಥಿಕ ವ್ಯವಸ್ಥೆಯ ಇತಿಹಾಸದ ಒಂದು ಭಾಗವೆಂದು ಗುರುತಿಸಿದ್ದಾರೆ. ಇದು ರಾಜರ ಆಳ್ವಿಕೆಯ ಕಾಲದಿಂದ ಹಿಡಿದು ಒಂದು ವ್ಯವಸ್ಥೆಯಾಗಿ ಆರ್ಥಿಕ ಅಭಿವೃದ್ಧಿಗೆ ಪ್ರೇರಕಶಕ್ತಿಯಾಗಿ ನಿಂತಿದೆ. ಅಂದಿನ ಕಾಲದಲ್ಲಿ ಸಮಾಜದ ಒಂದು ಪ್ರಮುಖ ಅಂಗ ಎಂದರೆ ಕೃಷಿ ಪದ್ಧತಿಯೇ ಆಗಿದೆ. ಆದ್ದರಿಂದಲೇ ವ್ಯಾಪಾರ ವಹಿವಾಟಿಗೆ ಸಂಬಂಧಿಸಿದಂತೆ ಎಲ್ಲಾ ಅಂಶಗಳು ಆರ್ಥಿಕ ವ್ಯವಸ್ಥೆಯಿಂದ ತಿಳಿಯಬಹುದು. ವ್ಯಾಪಾರ ಎನ್ನುವುದು ಒಂದು ವೃತ್ತಿ ಎಂದು ಹೇಳಬಹುದು. ವೃತ್ತಿ ಎನ್ನುವುದು ಇಂದು ನಿನ್ನೆಯದಲ್ಲ. ಪ್ರಾಚೀನ ಕಾಲದಿಂದಲೂ ರೂಢಿಯಲ್ಲಿರುವಂತಹದ್ದು. ಆದುದರಿಂದ ಸಮಾಜದಲ್ಲಿ ವೃತ್ತಿಜೀವನ ಒಂದು ಅವಶ್ಯಕತೆಯಾಗಿ ನಿಂತಿದೆ. ವ್ಯಕ್ತಿಗೆ ಮಾನವನಷ್ಟು ಇತಿಹಾಸವಿದ್ದರು ಕಡತಗಳಲ್ಲಿ ದಾಖಲೆಗಳಲ್ಲಿ ಶಾಸನಗಳಲ್ಲಿ ಉಲ್ಲೇಖವಿದೆ. ಏಕೆಂದರೆ ಮಾನವನ ವೃತ್ತಿಗೆ ಅವಲಂಬಿಸಬೇಕಾದುದು ಅನಿವಾರ್ಯವಾಗಿದ್ದು, ಈ ವೃತ್ತಿಯಿಂದಲೇ ಮಾನವನು ಜೀವನ ಸಾಗಿಸುತ್ತಿದ್ದನು. ಇನ್ನೊಂದೆಡೆ ಅನಾಗರಿಕತೆ ತಾಂಡವಾಡುತ್ತಿದ್ದರಿಂದ ವ್ಯಾಪಾರ ವೃತ್ತಿ ಮಾಡಲೇಬೇಕಾಗಿತ್ತು. ಆದುದರಿಂದ ಮಾನವನ ಶ್ರಮ ಅಪಾರವಾಗಬೇಕಿತ್ತು. ಭೂಮಿಯಲ್ಲಿ ನೈಸರ್ಗಿಕವಾಗಿ ದೊರೆಯುವ ಸಂಪನ್ಮೂಲಗಳನ್ನು ಉಪಯೋಗಿಸುತ್ತಾ ತನ್ನ ಬದುಕನ್ನು ಸಾಗಿಸುತ್ತಿದ್ದನು.

ಮಾನವ ಬುದ್ಧಿಜೀವನ ಬೌದ್ಧಿಕ ವಿಕಾಸವಾದಂತೆಲ್ಲ ವೃತ್ತಿಗಳಲ್ಲಿ ಹಲವಾರು ಬದಲಾವಣೆಗಳನ್ನು ಕಂಡುಕೊಂಡನು. ವೃತ್ತಿಯ ಗುಣಮಟ್ಟ ಹಾಗೂ ಅವುಗಳನ್ನು ಬಳಸಿಕೊಳ್ಳುವ ವಿಧಾನದಿಂದಲೇ ಆ

ನಾಡಿನ ಆರ್ಥಿಕಾಭಿವೃದ್ಧಿಯು ತಿಳಿದುಬರುತ್ತಿತ್ತು. ಆರ್ಥಿಕ ವ್ಯವಸ್ಥೆಯು ಸಮಾಜದ ಮಹತ್ವದ ಒಂದು ಭಾಗ. ಮಾನವ ಶ್ರಮಜೀವಿ, ತನ್ನ ನಿತ್ಯ ದುಡಿಮೆಯ ಮೂಲಕ ಆರ್ಥಿಕ ಮುಗ್ಗಟ್ಟಿನಿಂದ ಬಿಡುಗಡೆ ಹೊಂದುತ್ತಿದ್ದನು. ಹೀಗಾಗಿ ಮಾನವನ ವೃತ್ತಿ ಬದುಕಿನಲ್ಲಿ ಅತ್ಯಂತ ಮೌಲ್ಯವುಳ್ಳ ಅಂಶವಾಗಿ ಕಾಣುತ್ತದೆ. ಶ್ರಮದಲ್ಲಿ ನಿಷ್ಠೆ ಮತ್ತು ಪ್ರಾಮಾಣಿಕತೆ ಇದ್ದಷ್ಟು ವೃತ್ತಿಗೆ ಹೊಳಪು ಬರುತ್ತದೆ. "ಶ್ರಮ ಮತ್ತು ವೃತ್ತಿಗಳು ನಾಡಿನ ಆರ್ಥಿಕ ಜೀವನದ ನಾಡಿ ಎನಿಸಿದ್ದವು"[೪೩] ಅದರಂತೆಯೇ ಕರ್ನಾಟಕದ ಅನೇಕ ಶಾಸನಗಳಲ್ಲಿ ಹಾಗೆ ಕೊಪ್ಪಳ ಜಿಲ್ಲೆಯ ಶಾಸನಗಳು ಆರ್ಥಿಕ ವ್ಯವಸ್ಥೆಯ ಬಗ್ಗೆ ತಿಳಿಸುವಲ್ಲಿ ಹೊರತಾಗಿಲ್ಲ.

**ಧಾರ್ಮಿಕ ವ್ಯವಸ್ಥೆ :** ಭಾರತೀಯ ಸಂಸ್ಕೃತಿಯ ಹಿನ್ನಲೆಯ ಪ್ರತೀಕವಾಗಿ ಧರ್ಮ ಬೆಳೆದುಕೊಂಡು ಬಂದಿತು. ಪರಂಪರೆಯಿಂದ ಬಂದ ಧಾರ್ಮಿಕ ವ್ಯವಸ್ಥೆಯ ತಳಹದಿಯ ಮೇಲೆಯೇ ಜನಜೀವನ ನಿಂತಿದ್ದನ್ನು ಕಾಣುತ್ತೇವೆ. ಪ್ರಾಚೀನ ಕಾಲದಿಂದಲೂ ಧಾರ್ಮಿಕ ಮನೋಭಾವನೆಯನ್ನು ರೂಢಿಸಿಕೊಂಡು ಬಂದ ಮಾನವನ ಅನೇಕ ಆಚಾರ-ವಿಚಾರಗಳ ಸ್ವಾಧೀನವಾಗಿ ಧರ್ಮವು ಅಸ್ತಿತ್ವಕ್ಕೆ ಬಂದಿತು. ಕರ್ನಾಟಕದಲ್ಲಿ ಮೊದಲಿನಿಂದಲೂ ಅಸ್ತಿತ್ವದಲ್ಲಿದ್ದ ಧರ್ಮಕ್ಕೆ ಅತ್ಯಂತ ಉನ್ನತವಾದ ಸ್ಥಾನವನ್ನು ನೀಡಲಾಗಿದೆ. ಸಮಾಜದ ನಡುವೆ ಸಾಮರಸ್ಯತೆ ಉಂಟುಮಾಡುವ ಫಲವಾಗಿ ಧರ್ಮದೃಷ್ಟಿ ವಿಕಾಸಗೊಳ್ಳುತ್ತಾ ಬಂದಿತು. ಹೀಗಾಗಿ ಪ್ರತಿಯೊಂದು ಪ್ರದೇಶದಲ್ಲಿನ ಮಾನವನ ಪ್ರಗತಿಗೆ ಇಂತಹ ಧರ್ಮಗಳು ಶ್ರಮಿಸಿವೆ. ವಿಶೇಷವಾಗಿ ಕನ್ನಡನಾಡಿನ ಸಾಂಸ್ಕೃತಿಕ ಪ್ರಗತಿಗೆ ರಾಜಕೀಯ ಇತಿಹಾಸದಂತೆಯೇ ಇಲ್ಲಿನ ಧಾರ್ಮಿಕ ವ್ಯವಸ್ಥೆಯೂ ಮಹತ್ವದ ಪಾತ್ರವಹಿಸಿದೆ. ಪ್ರಾಚೀನ ಕಾಲದಿಂದಲೂ ಕರ್ನಾಟಕದ ಇತಿಹಾಸದೊಂದಿಗೆ ಬೌದ್ಧ, ಜೈನ, ವೈಷ್ಣವ ಮತ್ತು ಶೈವಧರ್ಮಗಳು ಮಧ್ಯ ಆಧುನಿಕ ಇತಿಹಾಸದಲ್ಲಿ ಇಸ್ಲಾಂ, ಕ್ರೈಸ್ತ ಧರ್ಮಗಳು ಈ ಪ್ರದೇಶದಲ್ಲಿ ಬೆಳೆದು ಬಂದಿದ್ದನ್ನು ನಾವು ಕಾಣುತ್ತೇವೆ.

ಧರ್ಮ ಸಹಿಷ್ಣುತೆಯನ್ನನುಸರಿಸಿದ ಕರ್ನಾಟಕದ ಅರಸು ಮನೆತನಗಳು ಆ ಧರ್ಮಗಳ ಅನುಯಾಯಿಗಳಿಗೆ ಧಾರ್ಮಿಕ ಸ್ವಾತಂತ್ರ್ಯವನ್ನು ನೀಡಿದ್ದರು. ಧರ್ಮ ಸಮನ್ವಯತೆ ಆ ಕಾಲದ ರಾಜ್ಯಾಡಳಿತದ ಮುಖ್ಯಲಕ್ಷಣವಾಗಿತ್ತು. ಸ್ವಧರ್ಮರಕ್ಷಣೆ ಮತ್ತು ಪರಧರ್ಮ ಸಹಿಷ್ಣುತೆ ಎನ್ನುವುದು ಅಂದಿನ ಅರಸರ ಧ್ಯೇಯವಾಗಿತ್ತು.[೪೪]

ಮಾನವನಿಗೆ ಧರ್ಮ ಸಂಸ್ಕೃತಿಗಾಗಿ ಹಾಗೂ ಮನಶಾಂತಿಗಾಗಿ ಧರ್ಮವು ತನ್ನ ಜೀವನದ ಅವಿಭಾಜ್ಯ ಅಂಗವೆನಿಸಿತ್ತು. ಕೊಪ್ಪಳ ಪ್ರದೇಶದಲ್ಲಿ ಹಳ್ಳಿಯಿಂದ ಹಿಡಿದು ನಗರಗಳವರೆಗೂ ಎಲ್ಲ ಧರ್ಮೀಯರು ಪ್ರತಿಯೊಂದು ಹಬ್ಬ, ಉರುಸು, ಉತ್ಸವ, ಜಾತ್ರೆಗಳನ್ನು ಪ್ರಾಚೀನ ಕಾಲದಿಂದ ಹಿಡಿದು ಇಂದಿಗೂ ರೂಢಿಸಿಕೊಂಡು ಇತರ ಪ್ರದೇಶಗಳ ಜನರಿಗೆ ಮಾದರಿಯಾಗಿದ್ದಾರೆ. ಹಿಂದುಗಳಿಗೆ ವರ್ಷವೆಲ್ಲ ಹಬ್ಬಗಳಿಂದ ಮುಕ್ತಿಯೇ ಇಲ್ಲ. ಅವರು ಆಚರಿಸುವ ಹಬ್ಬಗಳಲ್ಲಿ ಈ ಕೆಳಗಿನವುಗಳು ಪ್ರಮುಖವಾದವು.

ಯುಗಾದಿ, ರಾಮನವಮಿ, ಗಣೇಶ ಚತುರ್ಥಿ, ದೀಪಾವಳಿ, ಮಕರ ಸಂಕ್ರಾಂತಿ, ಮಹಾಶಿವರಾತ್ರಿ, ಹೋಳಿ ಜರುಗುವ ಹಬ್ಬಗಳಲ್ಲಿ ಕೇವಲ ಹಿಂದುಗಳಲ್ಲದೆ, ಮುಸ್ಲಿಮರು ಭಾಗವಹಿಸಿ ಪರಸ್ಪರ ಸಹೋದರತ್ವದ ಭಾವನೆಯಿಂದ ಆಚರಿಸಿ ಸಂಭ್ರಮಪಡುತ್ತಾರೆ. ಈ ಪ್ರದೇಶದ ನಗರ ಹಾಗೂ ಹಳ್ಳಿಗಳಲ್ಲಿ ಅನೇಕ ಜಾತ್ರೆಗಳು ಉರುಸುಗಳು ಮತ್ತು ಪ್ರಮುಖ ಐತಿಹಾಸಿಕ ಉತ್ಸವಗಳಾದ ಆನೆಗೊಂದಿ, ಇಟಗಿ ಉತ್ಸವಗಳಲ್ಲಿ ಎಲ್ಲ ಧರ್ಮದವರು ಭಾಗವಹಿಸಿ ಆಚರಿಸುವ ಸಂಪ್ರದಾಯವನ್ನು ಹೊಂದಿದ್ದಾರೆ. ಇಂದು ಪ್ರಾಚೀನ ಹಾಗೂ ಮಧ್ಯಕಾಲೀನ ಆಧುನಿಕತೆಯ ಚರಿತ್ರೆಯ ಸಂಸ್ಕೃತಿಯನ್ನು ಅನುಸರಿಸಿಕೊಂಡು ಅದನ್ನು ಪೋಷಿಸಿ ಶ್ರೀಮಂತಗೊಳಿಸಿದ ಕೀರ್ತಿ ಈ ಪ್ರದೇಶದ ನಾಗರಿಕರದ್ದಾಗಿದೆ.

ಅದೇ ರೀತಿಯಾಗಿ ಮಹಮ್ಮದೀಯರಲ್ಲಿ ಮುಖ್ಯವಾದ ಹಬ್ಬಗಳೆಂದರೆ, ಈದ್ ಮಿಲಾದ್, ಮೊಹರಂ, ಹಿಂದೂ-ಮುಸ್ಲಿಮರ ಸಮ್ಮಿಲನಗಳ ಭಾವೈಕ್ಯತೆಯ ಪ್ರಮುಖ ಹಬ್ಬವಾಗಿದೆ. ಹಳ್ಳಿಗಳಲ್ಲಿ ಪ್ರಾಚೀನ ಸಂಪ್ರದಾಯದ ಜನಪದ ಹಾಡುಗಳನ್ನು ಹಾಡುತ್ತಾ, ಹೆಜ್ಜೆ ಹಾಕುತ್ತಾ ಮೆರವಣಿಗೆಯಲ್ಲಿ ಇತರ ಧರ್ಮದವರು ಭಾಗವಹಿಸುತ್ತಾರೆ. ಅದರಂತೆ ಕ್ರಿಶ್ಚಿಯನ್ನರು ಮುಖ್ಯವಾಗಿ ಹೊಸ ವರ್ಷದ ದಿನ ಸೇಂಟ್ ಜೋಸೆಫ್‌ನ ಔತಣದ ದಿನ ಈಸ್ಟರ್, ಮೇರಿಯ ಜನ್ಮದಿನ ಮತ್ತು ಕ್ರಿಸ್‌ಮಸ್‌ಗಳನ್ನು ಆಚರಿಸುತ್ತಾರೆ. ಹೀಗೆ ಸಾಂಸ್ಕೃತಿಕ ಪರಂಪರೆಯಲ್ಲಿ ಕೊಪ್ಪಳ ಜಿಲ್ಲೆಯು ಮಹತ್ವದ ಸ್ಥಾನವನ್ನು ಪಡೆದುಕೊಂಡಿದೆ.

**ಸಾಮಾಜಿಕ ವ್ಯವಸ್ಥೆ :** ಪ್ರತಿಯೊಂದು ಸಮಾಜವು ತನ್ನದೇ ಆದ ಒಂದು ಸಂಸ್ಕೃತಿಯನ್ನು ಹೊಂದಿರುತ್ತದೆ. ಸಮಾಜ ಜೀವನವು ಒಂದು ವ್ಯವಸ್ಥೆಯ ನೆಲೆಯಲ್ಲಿಯೇ ಮುಂದುವರೆದಾಗ ಸಮಾಜವು ಮೌಲ್ಯಯುತವಾಗಿರುತ್ತದೆ ಎಂಬ ವಿಶ್ವಾಸ ಹೊಂದಿರುತ್ತದೆ. ವ್ಯವಸ್ಥೆಯ ಒಂದು ಚೌಕಟ್ಟು, ಇದರ ಪ್ರಧಾನ ನೆಲೆ. ಮಾನವ ಸಮಾಜವು ಜೀವನದ ಪ್ರತಿಯೊಂದು ಮುಖಕ್ಕೂ ಅನ್ವಯವಾಗುತ್ತದೆ. ಏಕೆಂದರೆ ಸಾಮಾಜಿಕ ಸಂಬಂಧಗಳು ಮಾನವನ ಒಟ್ಟಾರೆ ಜೀವನಕ್ಕೆ ಸಂಬಂಧಿಸಿರುತ್ತದೆ. ಆಚಾರ-ವಿಚಾರಗಳು ಸುಸಂಸ್ಕೃತ ಜೀವನದ ಸಾಮಜೀಕರಣ ಸಮಾಜದಲ್ಲಿಯೇ ಸಾಧ್ಯವಾಗುತ್ತದೆ. ಸಮಾಜವು ಮಾನವರೆಲ್ಲರನ್ನು ಒಟ್ಟುಗೂಡಿಸಿ ಸಮಾನತೆಯ ಆಧಾರದ ಮೇಲೆ ನಿಲ್ಲಿಸುವ ನಿರಂತರ ಪ್ರಯತ್ನ ಮಾಡುತ್ತದೆ. ಪ್ರಾಚೀನ ಕರ್ನಾಟಕದಲ್ಲಿ ಸಾಮಾಜಿಕ ಪ್ರಜ್ಞೆಯು ಬೆಳೆದಂತೆ ವ್ಯಕ್ತಿಯು ತನ್ನಷ್ಟಕ್ಕೆ ತಾನು ಬಾಳದೆ ಇತರರಿಗಾಗಿಯೂ ಬಾಳಬೇಕೆಂಬ ಅರಿವು ಅವನಿಗೆ ಸಂಪೂರ್ಣವಾಗಿ ಇದ್ದಿತ್ತೆಂಬುದನ್ನು ತೋರಿಸುವುದೇ ಆಗಿದೆ. ಈ ಆದರ್ಶವು ಪ್ರಾಚೀನ ಕರ್ನಾಟಕದಿಂದಲೂ ಮುಂದುವರೆದುಕೊಂಡು ಬಂದಿದೆ. ಭೌತಿಕ ಮತ್ತು ಭಾವನಾತ್ಮಕ ಅವಶ್ಯಕತೆಗಳಿಗೆ ಅನುಗುಣವಾಗಿ ರೂಪುಗೊಳ್ಳುವ ಸಮಾಜ ಮನುಕುಲದ ಸಾಂಸ್ಕೃತಿಕ ವಿಕಾಸಕ್ಕೆ ಅಗತ್ಯವಾದ ಬುನಾದಿಯನ್ನು ಕಲ್ಪಿಸುತ್ತದೆ. ಸಾಮಾಜಿಕ ಬಾಂಧವ್ಯಗಳ ರೂಪಗಳು, ವೈವಿಧ್ಯಗಳು ರೂಢಿ, ಪರಂಪರೆ ಹಾಗೂ ಆಚಾರ-ವಿಚಾರಗಳ ನಡುವಣ ಸಂಬಂಧವನ್ನು ಸಮಾಜ ಹೊಂದಿದೆ.

ಭಾರತೀಯ ಹಿಂದೂ ಸಮಾಜವು ಅಸಂಖ್ಯಾತವು ಜಾತಿ ಉಪಜಾತಿಗಳಿಂದ ವಿಭಾಗಗೊಂಡು ಜೀವನದ ಎಲ್ಲರಂಗಗಳಲ್ಲಿಯೂ ಜಾತಿ ಹಾಸುಹೊಕ್ಕಾಗಿ ಪರಿಣಮಿಸುವಂತಾಗಿದೆ. ಜಾತಿಯ ವ್ಯವಸ್ಥೆಯಲ್ಲಿ ವ್ಯಕ್ತಿಯ ಸದಸ್ಯತ್ವವು ಹುಟ್ಟಿನಿಂದ ಮಾತ್ರ ನಿರ್ಧರಿತವಾಗುತ್ತದೆ. ವ್ಯಕ್ತಿಯ ಹುಟ್ಟು ಆತನ ಜಾತಿಯನ್ನು ಜೀವನಪರ್ಯಂತವಾಗಿ ನಿಶ್ಚಯಗೊಳಿಸುತ್ತದೆ. ಸಮಾಜದಲ್ಲಿ ಬದುಕುವ ಅನೇಕ ಬಗೆಯ ಜನರನ್ನು ಪ್ರತ್ಯೇಕವಾಗಿ ಗುರುತಿಸುವ ಸಲುವಾಗಿ ಬಹುಮುಖ್ಯವಾಗಿ ಈ ಜಾತಿ ವ್ಯವಸ್ಥೆಯ ಪ್ರಾಚೀನ ಕಾಲದಿಂದಲೂ ಉಳಿದುಕೊಂಡು ಬಂದಿದೆ. ಜಾತಿ ಪದ್ಧತಿಯು ಕ್ರಮಬದ್ಧವಾದ ಸಾಮಾಜಿಕ ಏಣಿ ಶ್ರೇಣಿಯಾಗಿದ್ದು ಈ ಜಾತಿ ವ್ಯವಸ್ಥೆಯನ್ನು ಚತುರ್ವರ್ಣಗಳಿಂದ ವಿಭಾಗಿಸಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ವರ್ಣಗಳನ್ನಾಗಿ ವಿಭಾಗಿಸಲಾಗಿತ್ತು. ಈ ಜಾತಿಪದ್ಧತಿಯ ಆಧಾರದ ಮೇಲೆಯೇ ಅವರವರ ಸಂಸ್ಕೃತಿ, ಆಚಾರ-ವಿಚಾರಗಳು, ಅಂತಸ್ತು, ಲೋಕರೂಢಿಗಳು ಮತ್ತು ಬಹುಮುಖ್ಯವಾಗಿ ಕಾರ್ಯಗಳು ನಿರ್ಧರಿತವಾಗುತ್ತಿದ್ದವು. ಒಂದು ಜಾತಿಯಲ್ಲಿ ಹುಟ್ಟಿದ ವ್ಯಕ್ತಿ ಅದೇ ಜಾತಿಗೆ ಸಂಬಂಧಪಟ್ಟ ಸಂಸ್ಕೃತಿ, ಅಂತಸ್ತು, ಕಾಯಕಗಳನ್ನೇ ಆಚರಿಸುವಂತಿರಲಿಲ್ಲ. ಇವೆಲ್ಲವೂ ತಮ್ಮ ತಮ್ಮ ಉಪಜಾತಿಗೆ ಸಂಬಂಧಿಸಿರುವವರನ್ನು ಒಟ್ಟುಗೂಡಿಸುವ ವಿಶೇಷ ಶಕ್ತಿಗಳಾಗಿ ಕೆಲಸ ಮಾಡುತ್ತಿದ್ದವು. ನಿರ್ದಿಷ್ಟ ಜಾತಿ ಉಪಜಾತಿಗೆ ಸಂಬಂಧಿಸಿದ ಕಟ್ಟುಪಾಡುಗಳನ್ನು ಅನುಸರಿಸಿ ವರ್ತಿಸುವವರಿಗೆ ಹೆಚ್ಚಿನ ಸಾಮಾಜಿಕ ಮಾನ್ಯತೆ ಇರುತ್ತಿತ್ತು. ಕೊಪ್ಪಳ ಜಿಲ್ಲೆಯ ಅರಸರ ಆಡಳಿತದ ಅವಧಿಗಾಗಲೇ ಈ ಹಿಂದೆ ಭಾರತದಲ್ಲಿದ್ದ ವರ್ಣಾಶ್ರಮ ಪದ್ಧತಿ ಸ್ವಲ್ಪ ಮಟ್ಟಿಗೆ ಅಳಿದಿತ್ತೆಂದು ಹೇಳಬಹುದಾಗಿದೆ. ಈ ವರ್ಣ ವ್ಯವಸ್ಥೆಯನ್ನು ಪರಿಪಾಲಿಸಿಕೊಂಡು ಬರುವುದು ಕ್ರಮೇಣ ಕಷ್ಟವಾಗುತ್ತಾ ಬಂದಿರಬೇಕೆಂದು ತಿಳಿದುಬರುತ್ತದೆ.

ಹೀಗೆ ಪ್ರದೇಶದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ಪದಗಳು ಬಳಕೆಯಾಗಿದ್ದರೂ ಅವು ಹಿಂದಿನ ಅರ್ಥವನ್ನು ಬಹುಮಟ್ಟಿಗೆ ಕಳೆದುಕೊಂಡಿದ್ದವೆಂಬುದು ಇದರಿಂದ ಸೂಚಿತವಾಗುತ್ತದೆ. ಕೊಪ್ಪಳ ನಾಡಿನ ಶಾಸನಗಳಲ್ಲಿ ದೊರೆತ ಆಧಾರಗಳಿಂದ ಬೇರೆ ಬೇರೆ ಜಾತಿಗಳವರು ಊರಿನ ಬೇರೆ ಬೇರೆ ಕೇರಿ-ಬೀದಿಗಳಲ್ಲಿ ವಾಸಿಸುತ್ತಿದ್ದರು ಎಂದು ಹೇಳಬಹುದು. ತಮ್ಮದಾದ ಕಟ್ಟುಪಾಡುಗಳಿಗೆ ಒಳಗಾಗಿ ಆ ಸಮಾಜದ ಒಂದು ಚೌಕಟ್ಟಿನಲ್ಲಿ ಜೀವನ ಸಾಗಿಸುತ್ತಿದ್ದಂತೆ ತಿಳಿದುಬರುತ್ತದೆ. ಕೊಪ್ಪಳ ಜಿಲ್ಲೆಯ ಶಾಸನಗಳು ಇಂತಹ ಅನೇಕ ಜಾತಿಗಳನ್ನು ಉಲ್ಲೇಖಿಸಿವೆ.[೪೫]

**ಸಾಂಸ್ಕೃತಿಕವಾಗಿ ಕೊಪ್ಪಳ ಜಿಲ್ಲೆ :** ಒಂದು ನಾಡಿನ ಇತಿಹಾಸವೆಂದರೆ ಆ ನಾಡನ್ನು ಕಾಲದಿಂದ ಕಾಲಕ್ಕೆ ಆಳಿದ ಇತಿಹಾಸವೆಂಬ ಭಾವನೆ ಬಹು ಪ್ರಚಲಿತವಾಗಿದೆ. ಕೊಪ್ಪಳ ಜಿಲ್ಲೆಯನ್ನು ಸಾಂಸ್ಕೃತಿಕವಾಗಿ ನೋಡಿದಾಗ ಸಾಹಿತ್ಯ, ರಂಗಕರ್ಮಿಗಳು, ಕಲೆ ವಾಸ್ತುಶಿಲ್ಪ, ಪ್ರಾಚೀನ ಪುರಾವೆಗಳು ಸ್ವಾತಂತ್ರ ಹೋರಾಟಗಾರರು, ನಾಟಕಗಾರರು, ಕಲಾವಿದರು ಹೀಗೆ ಸಂಸ್ಕೃತಿಕವಾಗಿ ಇತರ ಎಲ್ಲ ಅಂಶಗಳ ಚಟುವಟಿಕೆಯಲ್ಲಿ ಅತ್ಯಂತ ಮಹತ್ವದ ಪ್ರಾಮುಖ್ಯತೆಯನ್ನು ಪಡೆದುಕೊಂಡು ಸಾಂಸ್ಕೃತಿಕವಾಗಿ ಈ ಪ್ರದೇಶವು ಶ್ರೀಮಂತಿಕೆಯ ಸ್ಥಾನವನ್ನು ಅಲಂಕರಿಸಿದೆ. ಒಂದು ನಾಡು ಎಂದರೆ ಅದನ್ನು ಆಳಿದ ರಾಜರು

ಅಲ್ಲ. ಅಲ್ಲಿ ಬದುಕಿದ ಜನ. ಹೀಗೆ ಬದುಕಿನ ಜನರ ಒಂದು ಗಣನೀಯವಾದ ಭಾಗ. ಆ ನಾಡನ್ನಾಳಿದ ರಾಜಸಮೂಹ, ಒಂದು ದೇಶದ ನಿಜವಾದ ಇತಿಹಾಸವೆಂದರೆ ಆ ಜನತೆಯ ಇತಿಹಾಸ. ಜನತೆಯ ಬದುಕಿನ ರೀತಿ, ಅನುಸರಿಸಿದ ಧರ್ಮ ಕಟ್ಟಿದ ಕಲೆ, ಅದರ ಜೀವನ ಸಮಸ್ಯೆಗಳು ಅದರ ಜೀವನ ಮೌಲ್ಯಗಳು ಇತ್ಯಾದಿಗಳ ವಿವರಣೆಯೇ ಆದೇಶದ ಇತಿಹಾಸ. ಜನಸಾಮಾನ್ಯರ ಜೀವನವನ್ನು ಕುರಿತಾದ ಇಂತಹ ಅಧ್ಯಯನವನ್ನು ಸಾಮಾಜಿಕ ಅಧ್ಯಯನವೆಂದೋ, ಸಾಂಸ್ಕೃತಿಕ ಅಧ್ಯಯನವೆಂದೋ ಕರೆಯಬಹುದಾಗಿದೆ. 'ಸಾಂಸ್ಕೃತಿಕ' ಅಧ್ಯಯನ ಎನ್ನುವ ಉಕ್ತಿಯೇ ಹೆಚ್ಚು ಉಚಿತವಾದುದು.[೪೬]

ಹೀಗೆ ಕೊಪ್ಪಳ ಪ್ರದೇಶವನ್ನೊಳಗೊಂಡ ಕನ್ನಡನಾಡನ್ನು ವಿವಿಧ ಕಾಲಾವಧಿಯಲ್ಲಿ ಅನೇಕ ಅರಸು ಮನೆತನಗಳು ಆಳ್ವಿಕೆ ನಡೆಸಿವೆ ಎಂಬುದನ್ನು ಇಲ್ಲಿ ಬಿಟ್ಟುಹೋದ ದಾಖಲೆಗಳನ್ನು ಆಧರಿಸಿ ಹೇಳುವುದಾದರೆ ಮೌರ್ಯರು, ಶಾತವಾಹನರು, ಬಾದಾಮಿ ಚಾಲುಕ್ಯರು, ಕದಂಬರು, ಗಂಗರು, ರಾಷ್ಟ್ರಕೂಟರು, ಹೊಯ್ಸಳರು, ವಿಜಯನಗರದ ಅರಸರು, ಬಹುಮುನಿ ಸುಲ್ತಾನರು, ಮರಾಠರು, ನಿಜಾಮರು ಇನ್ನು ಮುಂತಾದ ಪ್ರಮುಖ ಅರಸರು ಈ ಪ್ರದೇಶವನ್ನು ಸಾಂಸ್ಕೃತಿಕ ಶ್ರೀಮಂತಿಕೆಯ ನಾಡನ್ನಾಗಿ ಪರಿವರ್ತಿಸಿದ ಕೀರ್ತಿ ಇವರಿಗೆ ಸಲ್ಲುತ್ತದೆ.

**ಟಿಪ್ಪಣಿಗಳು**

೧. ಡಾ.ಕೆ.ಎಂ.ಸುರೇಶ್, (ಸಂ), **ಕರ್ನಾಟಕ ದೇವಾಲಯ ಕೋಶ ಕೊಪ್ಪಳ ಜಿಲ್ಲೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧, ಪುಟ ೪೯

೨. ಅದೇ, ಪುಟ ೫೦-೫೧

೩. ಅದೇ, ಪುಟ ೫೩-೫೪

೪. ಅದೇ, ಪುಟ ೫೪-೫೫

೫. ಅದೇ, ಪುಟ ೫೮

೬. ಅದೇ, ಪುಟ ೫೯

೭. ಬಸವರಾಜ ವೀ.ಮೂಲಿಮನಿಯವರ ಪ್ರಿಯಾಂಕ ಮಾಸಪತ್ರಿಕೆಯಲ್ಲಿ **ಅವನತಿಯ ಅಂಚಿನಲ್ಲಿ ಇರಕಲ್ಲಗಡಕೋಟೆ**, ಪ್ರಕಟಗೊಂಡ (ಲೇ), ಸೆಪ್ಟಂಬರ್, ೨೦೦೦, ಪುಟ ೨೩

೮. ಡಾ.ಕೆ.ಎಂ.ಸುರೇಶ್, (ಸಂ), **ಕರ್ನಾಟಕ ದೇವಾಲಯ ಕೋಶ ಕೊಪ್ಪಳ ಜಿಲ್ಲೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧, ಪುಟ ೩೫-೩೬

೯. ಅದೇ, ಪುಟ ೬೬

೧೦. ಡಾ.ಪುರುಷೋತ್ತಮ ಬಿಳಿಮಲೆ, '**ಹುಲಿಗೆಮ್ಮ**', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯, ಪುಟ ೯-೧೧, ೨೯-೩೦

೧೧. ಅದೇ, ಪುಟ ೨೪-೨೫

೧೨. ಡಾ.ಕೆ.ಎಂ.ಸುರೇಶ್, (ಸಂ), **ಕರ್ನಾಟಕ ದೇವಾಲಯ ಕೋಶ ಕೊಪ್ಪಳ ಜಿಲ್ಲೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧, ಪುಟ ೧೧೧

೧೩. ಅದೇ, ಪುಟ ೧೧೨-೧೧೩

೧೪. ಅದೇ, ಪುಟ ೮೩-೮೪

೧೫. ಡಾ.ಶರಣಬಸಪ್ಪ ಕೋಲ್ಕಾರ್, **ಅಕ್ಷಯ ಸವಿಸಂಚಿಕೆ,** ಗಂಗಾವತಿ ತಾಲೂಕು, ಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನ, ೨೦೦೨, ಪುಟ ೧೭-೧೮

೧೬. ಡಾ.ಕೆ.ಎಂ.ಸುರೇಶ, (ಸಂ), **ಕರ್ನಾಟಕ ದೇವಾಲಯ ಕೋಶ ಕೊಪ್ಪಳ ಜಿಲ್ಲೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧, ಪುಟ ೧೭-೧೮

೧೭. ಅದೇ, ಪುಟ ೮೬-೮೭

೧೮. ಅದೇ, ಪುಟ ೮೯-೯೦

೧೯. ಅದೇ, ಪುಟ ೯೦-೯೧

೨೦. ಡಾ.ಶರಣಬಸಪ್ಪ ಕೋಲ್ಕಾರ್, **ಅಕ್ಷಯ ಸವಿಸಂಚಿಕೆ,** ಗಂಗಾವತಿ ತಾಲೂಕು, ಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನ, ೨೦೦೨, ಪುಟ ೨೧-೨೨

೨೧. ಪ್ರೊ.ಎಸ್.ಎಸ್.ಹಿರೇಮಠ, **ಕೊಪ್ಪಳ ಜಿಲ್ಲೆಯ ಜಾತ್ರೆಗಳು,** ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು, ೨೦೦೦, ಪುಟ ೪೭-೪೯

೨೨. ಡಾ.ಕೆ.ಎಂ.ಸುರೇಶ, (ಸಂ), ಕರ್ನಾಟಕ ದೇವಾಲಯ ಕೋಶ ಕೊಪ್ಪಳ ಜಿಲ್ಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧, ಪುಟ ೧೨೯

೨೩. ಕೆ.ಶರಣಪ್ಪ ನಿಡಶೇಸಿ, **ಕೃಷ್ಣಗಿರಿ ಸಾಹಿತ್ಯಸಿರಿ,** ಕುಷ್ಟಗಿ ತಾಲೂಕು, ದ್ವಿತಿಯ ಕನ್ನಡ ಸಾಹಿತ್ಯ ಸಮ್ಮೇಳನ, ೨೦೦೨, ಪುಟ ೩೦

೨೪. ಡಾ.ಕೆ.ಎಂ.ಸುರೇಶ, (ಸಂ), **ಕರ್ನಾಟಕ ದೇವಾಲಯ ಕೋಶ ಕೊಪ್ಪಳ ಜಿಲ್ಲೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧, ಪುಟ ೧೦

೨೫. ಕೆ.ಶರಣಪ್ಪ ನಿಡಶೇಸಿ, **ಕೃಷ್ಣಗಿರಿ ಸಾಹಿತ್ಯಸಿರಿ,** ಕುಷ್ಟಗಿ ತಾಲೂಕು, ದ್ವಿತಿಯ ಕನ್ನಡ ಸಾಹಿತ್ಯ ಸಮ್ಮೇಳನ, ೨೦೦೨, ಪುಟ ೨೮

೨೬. ಅದೇ, ಪುಟ ೩೯

೨೭. ಕೆ.ಶರಣಪ್ಪ ನಿಡಶೇಸಿ, **ಕೃಷ್ಣಗಿರಿ ಸಾಹಿತ್ಯಸಿರಿ,** ಕುಷ್ಟಗಿ ತಾಲೂಕು, ದ್ವಿತಿಯ ಕನ್ನಡ ಸಾಹಿತ್ಯ ಸಮ್ಮೇಳನ, ೨೦೦೨, ಪುಟ ೩೮-೩೯

೨೮. ಡಾ.ಕೆ.ಎಂ.ಸುರೇಶ, (ಸಂ), **ಕರ್ನಾಟಕ ದೇವಾಲಯ ಕೋಶ ಕೊಪ್ಪಳ ಜಿಲ್ಲೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧., ಪುಟ ೨೧-೨೨

೨೯. ಅದೇ, ಪುಟ ೨೨-೨೩

೩೦. ಪ್ರೊ.ಅಲ್ಲಮಪ್ರಭು, ಬೆಟ್ಟದೂರು, ಎಚ್.ಎಸ್.ಪಾಟೀಲ, **‘ತಿರುಳ್ಗನ್ನಡ’**, ಸವಿಸಂಚಿಕೆ ಕೊಪ್ಪಳ, ೧೯೯೩, ಪುಟ ೧೮

೩೧. ಅದೇ, ಪುಟ ೧೮-೧೯

೩೨. ಡಾ.ಬಿ.ವ್ಹಿ.ಶಿರೂರ, **ಸಿದ್ಧಶ್ರೀ,** ಶ್ರೀ ಸಿದ್ಧರಾಮೇಶ್ವರ ಪ್ರಕಾಶನ, ಯಲಬುರ್ಗಿ, ೨೦೦೦, ಪುಟ ೫೬

೩೩. ಅದೇ, ಪುಟ ೫೮-೫೯

೩೪. ಪ್ರೊ.ಅಲ್ಲಮಪ್ರಭು, ಬೆಟ್ಟದೂರು, ಎಚ್.ಎಸ್.ಪಾಟೀಲ, **‘ತಿರುಳ್ಗನ್ನಡ’** ಸವಿಸಂಚಿಕೆ ಕೊಪ್ಪಳ, ೧೯೯೩, ಪುಟ ೧೫-೧೬

೩೫. ಅದೇ, ಪುಟ ೧೭

೩೬. ಡಾ.ಬಿ.ವ್ಹಿ.ಶಿರೂರ, **ಸಿದ್ಧಶ್ರೀ,** ಶ್ರೀ ಸಿದ್ಧರಾಮೇಶ್ವರ ಪ್ರಕಾಶನ, ಯಲಬುರ್ಗಿ, ೧೯೯೩, ಪುಟ ೬೭

೩೭. ಅದೇ, ಪುಟ ೬೭-೬೮

೩೮. ಡಾ.ಕೆ.ಎಂ.ಸುರೇಶ, (ಸಂ), **ಕರ್ನಾಟಕ ದೇವಾಲಯ ಕೋಶ ಕೊಪ್ಪಳ ಜಿಲ್ಲೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧, ಪುಟ ೧೬೧

೩೯. ಪ್ರೊ.ಎಸ್.ಎಸ್.ಹಿರೇಮಠ, **ಕೊಪ್ಪಳ ಜಿಲ್ಲೆಯ ಜಾತ್ರೆಗಳು,** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೦, ಪುಟ ೫೮-೫೯

೪೦. ಡಾ.ಬಿ.ವ್ಹಿ.ಶಿರೂರ, **ಸಿದ್ಧಶ್ರೀ,** ಶ್ರೀ ಸಿದ್ಧರಾಮೇಶ್ವರ ಪ್ರಕಾಶನ, ಯಲಬುರ್ಗಿ, ೨೦೦೦, ಪುಟ ೬೬

೪೧. ಅದೇ, ಪುಟ ೬೪

೪೨. ಡಾ.ಬಿ.ವ್ಹಿ.ಶಿರೂರ, **ಸಿದ್ಧಶ್ರೀ,** ಶ್ರೀ ಸಿದ್ಧರಾಮೇಶ್ವರ ಪ್ರಕಾಶನ, ಯಲಬುರ್ಗಿ, ೨೦೦೦, ಪುಟ ೬೬

೪೩. ಸಿದ್ದಲಿಂಗಪ್ಪ ಕೊಟ್ನೆಕಲ್, **ಕೊಪ್ಪಳ ಜಿಲ್ಲೆಯ ಶಾಸನಗಳು: ಸಮಗ್ರ ಅಧ್ಯಯನ,** (ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ), ಗುಲಬರ್ಗಾ ವಿಶ್ವವಿದ್ಯಾಲಯ, ೨೦೦೬, ಪುಟ ೯೩

೪೪. ಅದೇ, ಪುಟ ೧೦೭

೪೫. ಅದೇ, ಪುಟ ೧೭೩

೪೬. ಡಾ.ಎಂ.ಚಿದಾನಂದಮೂರ್ತಿ, **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ,** ಸಪ್ನ ಬುಕ್ ಹೌಸ್, ಬೆಂಗಳೂರು, ೧೯೯೬, ಪುಟ ೦೧

# ಐದು

## ಐತಿಹಾಸಿಕ ಸ್ಥಳಗಳ ಇಂದಿನ ಸ್ಥಿತಿಗತಿ

ಆಗಬೇಕಾದ ಕಾರ್ಯಗಳು ಮಾಡಬೇಕಾದ ಕೆಲಸಗಳು

ಸರಕಾರವು ಐತಿಹಾಸಿಕ ಸ್ಮಾರಕಗಳ ಸಂರಕ್ಷಣೆಗೆ ಕೈಗೊಳ್ಳಬೇಕಾದ ಕ್ರಮಗಳು

ಸಾರ್ವಜನಿಕರು ಐತಿಹಾಸಿಕ ಸ್ಥಳಗಳ ಬಗ್ಗೆ ತಾಳಬೇಕಾದ ನಿಲುವುಗಳು

## ಐದು

### ಐತಿಹಾಸಿಕ ಸ್ಥಳಗಳ ಇಂದಿನ ಸ್ಥಿತಿಗತಿ

ಕೊಪ್ಪಳ ನಗರವು ಹಲವಾರು ಒತ್ತಡಗಳಿಂದ ನಲುಗುತ್ತಿದೆ. ಅಭಿವೃದ್ಧಿ ಕಾರ್ಯಗಳಿಗಾಗಿ ಭೂಒತ್ತುವರಿ ನೀತಿ ಇದರಲ್ಲಿ ಮುಖ್ಯವಾಗಿದೆ. ಐತಿಹಾಸಿಕ ಪ್ರಜ್ಞೆಯ ಕೊರತೆ ಅವುಗಳ ರಕ್ಷಣೆಯಲ್ಲಿ ಎದುರಾಗುತ್ತಿದೆ. ಪ್ರಸ್ತುತವಾಗಿ ಇತ್ತೀಚಿನ ವಿದ್ಯಮಾನಗಳಲ್ಲಿ ಮಿತಿಮೀರಿದ ಜನಸಂಖ್ಯೆ ಇದಕ್ಕೆ ಪ್ರಮುಖ ಕಾರಣವಾಗಿದೆ. ೨೧ನೆಯ ಶತಮಾನದ ಪ್ರಾರಂಭದ ದಿನಗಳಲ್ಲಿಯೇ ಆ ಸೊಬಗಿನ ಹೊಂಗಿರಣವನ್ನು ನಿರ್ಲಕ್ಷಿಸುತ್ತಿರುವ ಮಾನವನು ಸಾವಿರಾರು ವರ್ಷಗಳ ಇತಿಹಾಸದ ಅಧ್ಯಯನದಿಂದ ವಿವೇಕಿ ಆಗಿದ್ದಾನೆಯೇ? ಎಂಬುದು ಪ್ರಮುಖವಾಗಿ ಮೂಡುವ ಪ್ರಶ್ನೆ. ಇದಕ್ಕೆ ಯಾವುದೇ ಸಂಕೋಚವಿಲ್ಲದೆ 'ಇಲ್ಲ' ಎಂದೇ ಉತ್ತರಕೊಡಬೇಕಾಗುತ್ತದೆ. ಏಕೆಂದರೆ ಅನಾಗರಿಕ ಸ್ಥಿತಿಯಲ್ಲಿದ್ದ ಹಾಗೆಯೇ ಶಿಲಾಯುಗಗಳಲ್ಲಿದ್ದ ಮಾನವನು ಕಲ್ಲುಗಳನ್ನು ಉಪಯೋಗಿಸಿ ನಂತರ ಲೋಹಗಳನ್ನು ಬಳಸಿ ತದನಂತರ ಶಸ್ತ್ರಾಸ್ತ್ರಗಳನ್ನು ತಯಾರಿಸಿ ಅಂದು ಸಮರದಲ್ಲಿ ತೊಡಗಿದ್ದರೆ, ಇಂದು ಅದೇ ಮಾನವನು ವೈಜ್ಞಾನಿಕ ಪ್ರಗತಿಯಿಂದಾಗಿ ಅತ್ಯಂತ ಭಯಂಕರವಾದ ಶಸ್ತ್ರಾಸ್ತ್ರಗಳನ್ನು ನಿರ್ಮಿಸಿಕೊಂಡು ಸಮಗ್ರ ಬದುಕನ್ನೇ ಸಂಪೂರ್ಣ ನಾಶಮಾಡುವ ಸ್ಥಿತಿಯಲ್ಲಿದ್ದಾನೆ.[೧] ಹೀಗೆ ಮಾನವನ ಅಟ್ಟಹಾಸದಿಂದ ಜಗತ್ತಿನ ಯಾವ ಸಂಸ್ಕೃತಿಯು ಉಳಿಯಲಾರದು. ಇದಕ್ಕೆ ಪರಿಹಾರವೆಂದರೆ ತಿಳುವಳಿಕೆ ಪ್ರಜ್ಞೆಯೊಂದೇ ದಾರಿ. ಮಾನವನ ವೈಯಕ್ತಿಕ ಬೇಡಿಕೆಗಳನ್ನು ಈಡೇರಿಸಿಕೊಳ್ಳುವ ಸಲುವಾಗಿ ಜಗತ್ತಿನ ಎಷ್ಟೋ ಸ್ಮಾರಕಗಳು ಪತನದ ಅಂಚಿನತ್ತ ಸಾಗಿವೆ. ಇನ್ನೊಂದು ಮಹತ್ವದ ಸವಾಲಿನ ಪ್ರಶ್ನೆ ಎಂದರೆ ಕೋಟೆ-ಕೊತ್ತಲುಗಳು ಸ್ಮಾರಕಗಳ ದೇವಾಲಯಗಳಲ್ಲಿ ನಿಧಿಯಿದೆ ಎಂಬ ತಪ್ಪುಗ್ರಹಿಕೆಯಿಂದ ಎಷ್ಟೋ ಐತಿಹಾಸಿಕ ಸ್ಮಾರಕಗಳು ಮಾನವನ ಹೊಡೆತಕ್ಕೆ ತುಂಡು ತುಂಡಾಗಿ ಬೀಳುತ್ತವೆ. ಹಾಗೆಯೇ ಜನಸಂದಣಿಯಿಲ್ಲದ ಎಷ್ಟೋ ಸ್ಮಾರಕಗಳು ಮಾನವನ ಅನೈತಿಕ ಚಟುವಟಿಕೆಗಳ ತಾಣಗಳಾಗಿವೆ. ಧಾರ್ಮಿಕ ಅಸಾಮರಸ್ಯದ ಪರಿಣಾಮವಾಗಿ ಸ್ಮಾರಕಗಳು ತಮ್ಮ ಅಸ್ತಿತ್ವವನ್ನು

ಕಳೆದುಕೊಳ್ಳುತ್ತಿವೆ. ಧರ್ಮದ ವೈಯಕ್ತಿಕ ಬೇಡಿಕೆಗಳ ಪೂರೈಕೆಗಾಗಿ ಕೈಗೊಳ್ಳುವ ಪ್ರಯತ್ನಗಳು ಸ್ಮಾರಕಗಳ ರಕ್ಷಣೆಯಲ್ಲಿ ಬಹುದೊಡ್ಡ ಅಡೆತಡೆಗಳಾಗಿವೆ. ಈ ಪ್ರದೇಶದ ಹಲವು ಐತಿಹಾಸಿಕ ಸ್ಮಾರಕ ಬಳಿ ಮನೆ ಕಟ್ಟಡಗಳು, ನಿರ್ಮಾಣಗೊಂಡು ಆ ಸ್ಥಳಗಳಲ್ಲಿ ಕಲ್ಮಶ ವಾತಾವರಣ ನಿರ್ಮಾಣಗೊಂಡು ಸ್ಮಾರಕಗಳು ತಮ್ಮ ನೈಜತೆಯ ಮಹತ್ವವನ್ನು ಕಳೆದುಕೊಳ್ಳುತ್ತಿವೆ. ಕೊಪ್ಪಳದ ಐತಿಹಾಸಿಕ ಕೋಟೆಯಲ್ಲಿ ರೈತರು ದನಕರುಗಳಿಗೆ ಮೇವು ಹಾಕಲು, ಬಣವಿ ಹಾಕಿಕೊಂಡು ದನಕರುಗಳಿಗೆ ಒದಗಿಸುವ ಆಹಾರ ದಾಸ್ತಾನು ಮಳಿಗೆ ಮಾಡಿಕೊಂಡಿದ್ದಾರೆ. ಆ ಸ್ಥಳಕ್ಕೆ ಭೇಟಿ ನೀಡಿದರೆ ಸುತ್ತಮುತ್ತಲಿನ ಮನೆಗಳ ಚರಂಡಿಯ ನೀರು, ದನಕರುಗಳ ಸಗಣಿ ವಾಸನೆಯ ದೃಶ್ಯ ಸಾಮಾನ್ಯವಾಗಿದೆ. ಕೊಪ್ಪಳ ನಗರದಲ್ಲಿನ ಒಂದನೆಯ ಕಮಾನು ಹಾಗೂ ಅಶೋಕ ವೃತ್ತದ ಸ್ಮಾರಕಗಳ ನೈಜ ಚಿತ್ರಣವನ್ನು ಅಳಸಿ ಹೊಸ ನವೀನ ಮಾದರಿಯಲ್ಲಿ ಆಧುನಿಕರಣಗೊಳಿಸಲಾಗಿದೆ. ಈ ರೀತಿ ನಿರ್ಣಯಗಳನ್ನು ಕೈಗೊಳ್ಳುವುದು ತಪ್ಪೇನಲ್ಲ ಆದರೆ ಗಟ್ಟಿಯಾದ ಭದ್ರಬುನಾದಿಯನ್ನು ಹೊಂದಿರುವ ಸ್ಮಾರಕಗಳ ಮೇಲೆ ಈ ನೀತಿಯನ್ನು ಅನುಸರಿಸುವುದನ್ನು ಬಿಟ್ಟು ಅಭದ್ರತೆಯನ್ನು ಹೊಂದಿರುವ ಸ್ಮಾರಕಗಳು ಸಾಕಷ್ಟಿವೆ. ಅವುಗಳ ಜೀಣೋದ್ಧಾರಕ್ಕೆ ಮುಂದಾಗಬೇಕಾಗಿದೆ. ನಗರದಲ್ಲಿ ರಾಜಾಭಕ್ಷಾದರ್ಗಾ ಮಳೆಯ ಅಬ್ಬರದ ಒಡತಕ್ಕೆ ದರ್ಗಾವು ಬಿರುಕುಗೊಂಡು ಬಿದ್ದಿದೆ. ಮತ್ತು ನಗರದ ಕೋಟೆಯ ಕೆಲವೊಂದು ಭಾಗದಲ್ಲಿ ಬಿರುಕುಗೊಂಡಿದೆ. ಜೈನರ ಬಸದಿಗಳು ಕೂಡ ಇಂದು ನಿರ್ಲಕ್ಷ್ಯ ಭಾವನೆಗೆ ಒಳಗಾಗಿವೆ. ಸರಕಾರವು ಇಂತಹ ಸ್ಮಾರಕಗಳ ಜೀರ್ಣೋದ್ಧಾರ ಮಾಡುವುದು ಸೂಕ್ತವೆನಿಸುತ್ತದೆ. ಇದರ ಜೊತೆಗೆ ಮುಖ್ಯವಾಗಿ ಸ್ಥಳೀಯರಿಗೆ ಇವುಗಳ ಕುರಿತು ಮಾಹಿತಿ ನೀಡುವುದು ಅತ್ಯಂತ ಅವಶ್ಯಕವಾಗಿದೆ.

ಇಂದು ನಗರದಲ್ಲಿ ಕೈಗಾರಿಕೆಗಳ ಸ್ಥಾಪನೆಯಿಂದಾಗಿ ಈ ಪರಿಸರ ಮಾಲಿನ್ಯದಿಂದ ಸ್ಮಾರಕಗಳು ತಮ್ಮ ನೆಲೆಗಟ್ಟಿನ ನೈಜತೆಯ ಸ್ವರೂಪವನ್ನು ಕಳೆದುಕೊಳ್ಳುತ್ತಿವೆ. ಇಂದು ಅಧಿಕಾರಶಾಹಿ ಮತ್ತು ವಸಾಹತುಶಾಹಿಗಳ ನೇರ ಆಕ್ರಮಣಗಳಿಗೆ ಒಳಗಾದ ಪ್ರದೇಶ ಚಾರಿತ್ರಿಕ ಹಿನ್ನೆಲೆಗಳನ್ನು ಅರಿತು ಅಲ್ಲಿ ಜನಸಾಮಾನ್ಯನು ಸಮನ್ವಯಗೊಳಿಸಿಕೊಳ್ಳುವ ನೆಲೆಗಳನ್ನು ಅರಿಯುವುದು ಪ್ರಸ್ತುತ ಸಂಗತಿಯಾಗಿದೆ. ಬಹುರಾಷ್ಟ್ರೀಯ ಕಂಪನಿಯ ಸಂಸ್ಕೃತಿಗೆ ನಾಗರಿಕರು ಒಳಗಾಗಿ ನಮ್ಮ ನಾಡಿನ ಸಂಸ್ಕೃತಿಯು ಹಂತ ಹಂತವಾಗಿ ನಾಶಹೊಂದುತ್ತಿದೆ. ಮುಂದುವರೆದ ರಾಷ್ಟ್ರಗಳ ಕೃಷಿ ತಂತ್ರಜ್ಞಾನ ಮತ್ತು ಅತ್ಯಾಧುನಿಕ ಕೈಗಾರಿಕಾ ತಂತ್ರಜ್ಞಾನಗಳು ಭಾರತದಂತಹ ರಾಷ್ಟ್ರಗಳಿಗೆ ವ್ಯಾಪಿಸಿ ಸ್ಮಾರಕಗಳ ಸ್ಥಿತಿ ಇಂದು ಶೋಚನೀಯ ಹಂತವನ್ನು ತಲುಪಿವೆ. ಈ ಕಂಪನಿಗಳು ಕೊಪ್ಪಳ ನಗರಕ್ಕೆ ವ್ಯಾಪಿಸಿ ಇಂದು ಸಂಸ್ಕೃತಿಯ ಸ್ಮಾರಕಗಳ ಮೇಲೆ ಹಿಡಿತವನ್ನು ಸಾಧಿಸಿವೆ.[೨]

ಕೊಪ್ಪಳ ಪ್ರದೇಶದ ಐತಿಹಾಸಿಕ ಸ್ಮಾರಕಗಳ ಕುರಿತು ಈ ಮೇಲಿನ ವಿವರಣೆಯಿಂದ ಅವು ನಮ್ಮ ನಾಡಿನ ಚರಿತ್ರೆಯ ಬಗ್ಗೆ ಎಷ್ಟು ಅಮೂಲ್ಯವಾದವು ಎಂಬುದು ಮನದಟ್ಟಾಗುವುದು, ಆದರೆ ಇಂಥಹ ಅರಿವು ಎಲ್ಲರಿಗೂ ಇಲ್ಲವೆಂಬುದು ಇತ್ತೀಚಿನ ಬೆಳವಣಿಗೆಯಿಂದ ತಿಳಿದುಕೊಳ್ಳಬಹುದಾಗಿದೆ. ಗುಡಿ

ಗುಂಡಾರಗಳಲ್ಲಿ, ಬೀದಿಯ ಬಳಿ, ಹೊಲಗಳಲ್ಲಿ ಗುಡ್ಡಗಳ ಮೇಲೆ ಮತ್ತು ಇನ್ನೆಲ್ಲಿಯೋ ಇಂಥ ಅನೇಕ ಕಲ್ಲುಗಳು ಬಿದ್ದಿರುವುದು ನಮ್ಮೆಲ್ಲರ ಕಣ್ಣಿಗೆ ಬೀಳುತ್ತವೆ. ಅವುಗಳಲ್ಲಿ ನಮ್ಮ ನಾಡಿನ ಚರಿತ್ರೆ ಇದೆ ಎಂಬ ಕಲ್ಪನೆ ಬಹುಜನರಿಗಿರುವುದಿಲ್ಲ. ಇದ್ದ ಕೆಲವರಿಗೂ ಉಪೇಕ್ಷೆ ಬೇರೆ ಇನ್ನು ಕೆಲವರಿಗೆ ಇದರಲ್ಲಾವ ಭೂತ ಅಡಗಿದೆಯೋ ಮುಟ್ಟಿದರೇನಾದಿತೋ ಎಂಬ ಭಯ! ಇನ್ನು ಕೆಲವರಿಗೆ ಈ ಅನಿಷ್ಟ ಇಲ್ಲಿ ಬೇಡ ಎಂದು ಇದ್ದ ಕಲ್ಲನ್ನು ಒಡೆದು ಹಾಕುವ ಪ್ರವೃತ್ತಿ. ಕೆಲವು ಕಲ್ಲುಗಳು ಭಾವುಕರ ಕೈಗೆ ಸಿಕ್ಕು ದೈವತ್ವವನ್ನು ಪಡೆದು ಎಣ್ಣೆ-ಸುಣ್ಣ-ಬಣ್ಣಗಳನ್ನು ಮೆತ್ತಿಸಿಕೊಂಡಿವೆ. ನಮ್ಮ ಪೂರ್ವಿಕರು ಶ್ರಮವಹಿಸಿ ಶ್ರದ್ಧೆಯಿಂದ ನಿರ್ಮಿಸಿದ ಎಷ್ಟೋ ಗುಡಿಗಳು ದನದ ಕೊಟ್ಟಿಗೆಗಳಂತೆ ಉಪಯೋಗಿಸಲ್ಪಡುತ್ತಿವೆ. ಬೆನ್ನುನೋವಿನ ಪರಿವೆಯಿಲ್ಲದೆ ತಿದ್ದಿತೀಡಿ ಮುತ್ತಿನ ಸಾಲುಗಳಂತೆ ಕಡೆದ ಅಕ್ಷರಗಳುಳ್ಳ ನಾಡಿಯ ಚರಿತ್ರೆಯನ್ನು ತನ್ನ ಮಡಿಲಲ್ಲಿ ಹೊಂದಿರುವ ಎಷ್ಟೋ ಶಿಲಾಶಾಸನಗಳು ಕೆಲವರ ಮನೆಯ ಬಚ್ಚಲನ್ನು ಅಲಂಕರಿಸಿವೆ! ಮಕ್ಕಳಾಟದ ಜಾರು-ಬಂಡಿಗಳಾದ ಕಲ್ಲುಗಳನ್ನೆಷ್ಟೋ ಇಂಥವುಗಳ ಉದಾಹರಣೆಗಾಗಿ ಕೊನೆಯೇ ಇಲ್ಲ.[೩]

ಈ ಮೊದಲು ಉಲ್ಲೇಖಿತವಾದ ೬-೭ನೆಯ ಶತಮಾನದ ಅಕ್ಷರಗಳುಳ್ಳ ಮಾದಿನೂರಿನ ಬಳಿ ತುಂಡು ಶಾಸನ ಅಲ್ಲಿ ಒಂದು ಹೊಲದಲ್ಲಿದ್ದಿತು. ಆ ಹೊಲದಲ್ಲಿ ಸರಿಯಾಗಿ ಫಸಲು ಬೆಳೆಯಲು ಸಾಧ್ಯವಾಗುತ್ತಿಲ್ಲವೆಂಬ ತಪ್ಪು ಕಲ್ಪನೆಯಿಂದ ಅಲ್ಲಿಯ ಅನಿಷ್ಟ ನಿವಾರಣೆಗಾಗಿ ಒಡೆಯಲ್ಪಟ್ಟಿತು. ಮುಂದೆ ಹೊಲ ಬೆಳೆಯಿತೋ ಇಲ್ಲವೋ ಅದು ಚರ್ಚೆಯ ವಿಷಯ. ಆದರೆ ಒಂದು ಮಹತ್ವದ ಶಾಸನ ಮಾತ್ರ ನಷ್ಟವಾಯಿತು. ಕೊಪ್ಪಳ ಪ್ರದೇಶದ ಗ್ರಾಮಗಳಲ್ಲಿ ಎಷ್ಟೋ ಗುಡಿಗಳಲ್ಲಿ ಅಲ್ಲಿಯ ಜನರು ತಮ್ಮ ದನಗಳನ್ನು ಕಟ್ಟುತ್ತಾರೆ. ಎಷ್ಟೋ ಆಕರ್ಷಕವಾದ ಶಿಲ್ಪಗಳು ಇಂದು ರಕ್ಷಣೆಯಿಲ್ಲದೆ ಕಸದ ತೊಟ್ಟಿಗಳಾಗಿವೆ.[೪]

ಜೈನರ ಕಾಶಿಯೆಂದು ಕರೆಯಲ್ಪಡುವ ಈ ಪ್ರದೇಶದಲ್ಲಿ ಬಸದಿಗಳು ಕೂಡ ಸುರಕ್ಷಿತವಾಗಿಲ್ಲ. ಇತಿಹಾಸಕಾರರು ಹೇಳುವಂತೆ "ದೇವಾಲಯಗಳನ್ನು ನಾಶಗೊಳಿಸಿದರೆ ಆ ಧರ್ಮವನ್ನೆ ನಾಶಮಾಡಿದಂತೆ" ನಮ್ಮ ಜಿಲ್ಲೆಯಲ್ಲಿ ಅನೇಕ ಜೈನಬಸದಿಗಳು ಸಾಕಷ್ಟು ನಾಶಗೊಳ್ಳುವ ಹಂತದಲ್ಲಿವೆ. ಅದರಂತೆ ಗವಿಮಠದ ಬಳಿಯಿರುವ ಜೈನ ಹಾಗೂ ಬೌದ್ಧಧರ್ಮಕ್ಕೆ ಸಂಬಂಧಿಸಿದ ಎಷ್ಟೋ ಶಿಲ್ಪಗಳು ಹಾಳಾಗಿ ಹಾಗೆಯೇ ಬಿದ್ದಿವೆ. ಇತ್ತೀಚಿನ ದಿನಗಳಲ್ಲಿ ಮಿತಿಮೀರಿದ ಜನಸಂಖ್ಯೆಯಿಂದ ನಮ್ಮ ಪ್ರದೇಶದ ಗುಡ್ಡ ಬೆಟ್ಟಗಳಲ್ಲಿನ ಕಲ್ಲುಗಳನ್ನು ಗೃಹ ಬಳಕೆಗಾಗಿ ಉಪಯೋಗಿಸಿಕೊಳ್ಳುತ್ತಿದ್ದಾರೆ. ಆ ಪ್ರದೇಶದಲ್ಲಿನ ಎಷ್ಟೋ ಶಾಸನ ದೇವಾಲಯ ಹಾಗೂ ಶಿಲ್ಪಗಳು ಮಾನವನ ಹೊಡೆತಕ್ಕೆ ತುಂಡುಕಲ್ಲುಗಳಾಗಿ ಬಿದ್ದಿವೆ. ಕೊಪ್ಪಳಕ್ಕೆ ಸಮೀಪದಲ್ಲಿರುವ ಬಹದ್ದೂರ ಬಂಡೆಯ ಕೋಟೆಯು ಕೂಡಾ ಅಭದ್ರಸ್ಥಿತಿಯನ್ನು ತಲುಪಿದೆ. ಈ ಕೋಟೆಯೊಳಗೆ ಹಾಗೂ ಹೊರಗಿನ ದೇವಾಲಯಗಳು ರಕ್ಷಣೆಯಿಲ್ಲದೆ ನಿರ್ಲಕ್ಷ್ಯಕ್ಕೆ ಒಳಗಾಗಿವೆ. ಇತಿಹಾಸದ ಪುಟಗಳಿಗೆ ಚಿನ್ನದ ಲೇಪನದಂತಿರುವ ಇರಕಲ್ಲಗಡ ಕೋಟೆ ಅವನತಿಯತ್ತ ಸಾಗಿರುವುದೊಂದು ವಿಪರ್ಯಾಸದ ಸಂಗತಿ. ಸಂಪ್ರದಾಯದಂತೆ ಪಂಚಮಿ ಹಬ್ಬದಂದು ಕೋಟೆ ಏರಿ ತಿಂಡಿ ತಿನಿಸು ತಿಂದು ಸಂತೋಷ ಪಡಬೇಕಾದ ಭಕ್ತಾದಿಗಳು ಕೋಟೆಯ ಕಲ್ಲುಗಳನ್ನು ಒಂದೊಂದಾಗಿ ಕೆಳಗುರುಳಿಸುತ್ತಿದ್ದಾರೆ.

ನಿಧಿಗಳ್ಳರ ಹಾವಳಿಯಿಂದ ಕೋಟೆಯ ತುಂಬೆಲ್ಲ ತಗ್ಗುಗಳು ಬಿದ್ದಿವೆ. ಕುಮಾರರಾಮನು ನೆಲಸಿದ್ದ ಕುಮ್ಮಟದುರ್ಗ ಕೋಟೆ ಯಾವುದೇ ಸಂರಕ್ಷಣೆ ಇಲ್ಲದೆ ಅಭದ್ರ ಸ್ಥಿತಿಯನ್ನು ತಲುಪಿದೆ. ಬೆಟ್ಟದ ಕೆಳಗೆ ಬಿದ್ದಿರುವ ವೀರಗಲ್ಲು ಮನೆಗಳ ಅವಶೇಷಗಳಾಗಿರುವುದು ಕಂಡುಬರುತ್ತವೆ.

ಗಂಗಾವತಿ ತಾಲೂಕಿನ ಆನೆಗೊಂದಿಯು ಪೂರಾಣ ಪ್ರಸಿದ್ಧವಾದ ಸ್ಥಳ. ಇಲ್ಲಿನ ಹಲವು ಸ್ಮಾರಕಗಳು ಕೂಡ ವಿನಾಶದ ಅಂಚಿನಲ್ಲಿವೆ. ಪ್ರಸಿದ್ಧ ಜೈನರ ಬಸದಿಯ ಉತ್ತರ ಭಾಗದ ಗರ್ಭಗುಡಿ ಭಾಗಶಃ ಹಾಳಾಗಿದೆ. ಬಸದಿಯ ಶೈಲಿಯ ಗೋಡೆಯ ಅಧಿಷ್ಠಾನ ಭಾಗವು ನೆಲದಲ್ಲಿ ಹೂತುಹೋಗಿವೆ. ಚಿಂತಾಮಣಿ ಮಠದ ಬಳಿಯಿರುವ ಒಂದು ಸ್ಮಾರಕವು ದನದ ಕೊಟ್ಟಿಗೆಯಾಗಿ ಬಳಕೆಯಾಗುತ್ತದೆ. ಅದರಂತೆ ಇತಿಹಾಸದಲ್ಲಿ ಮಹತ್ವದ ಸ್ಥಾನ ಪಡೆದಿರುವ ಕನಕಗಿರಿಯ ಹಲವಾರು ಸ್ಮಾರಕಗಳು ಬಿರುಕುಗೊಂಡಿವೆ. ಅಲ್ಲಿನ ಕೋಟೆಯ ಗೋಡೆಯ ಅರ್ಧಭಾಗವು ಸಂಪೂರ್ಣ ನಾಶ ಹೊಂದಿದೆ. ಅಲ್ಲಿನ ಐತಿಹಾಸಿಕ ಸ್ವಾರಸ್ಯವನ್ನು ಹೇಳುವ ಕಲ್ಲುಬಾವಿಯು ನಿರ್ಲಕ್ಷ್ಯಕ್ಕೆ ಒಳಗಾಗಿದೆ. ಕೊಪ್ಪಳ ಹಾಗೂ ಗಂಗಾವತಿ ತಾಲೂಕಿನ ನಡುವೆ ಇರುವ ಹೇಮಗುಡ್ಡದ ಕೋಟೆಯು ನಾಶದ ಸ್ಥಿತಿಯನ್ನು ತಲುಪಿದೆ. ಕೋಟೆಯ ನಂಬಿಕೆ ರೋಚಕವಾಗಿದೆ. ಹೇಮಗುಡ್ಡ ಕೋಟೆಯ ಹಿನ್ನೆಲೆಯನ್ನು ಅವಲೋಕಿಸಿದಾಗ ಆ ಕೋಟೆಯ ಮಹತ್ವ ತಿಳಿಯುತ್ತದೆ. ಇಂಥ ಚಾರಿತ್ರಿಕ ಹಿನ್ನೆಲೆ ಹೊಂದಿದ ಸ್ಥಳವು ಇಂದು ಕಾಲಿನ ಕಾಲ್ತುಳಿತಕ್ಕೂ ನಿಧಿಕೋರರ ಕೈಗೂ ಸಿಕ್ಕಿ ನರಳುತ್ತಿದೆ.

ಕುಷ್ಟಗಿ ತಾಲೂಕು ಪ್ರಾಕೃತಿಕ ಸಂಪತ್ತಿನೊಂದಿಗೆ ಸಾಂಸ್ಕೃತಿಕ, ಧಾರ್ಮಿಕ, ರಾಜಕೀಯ, ವಾಣಿಜ್ಯ ಹಾಗೂ ಇನ್ನಿತರ ರಂಗಗಳಲ್ಲಿ ಅಭಿವೃದ್ಧಿ ಹೊಂದುತ್ತಿರುವ ಪ್ರಮುಖ ಪಟ್ಟಣವಾಗಿದೆ. ಆದರೆ ಸ್ಮಾರಕಗಳು ರಕ್ಷಣೆಯಿಲ್ಲದೆ ನಾಶವಾಗುತ್ತಿವೆ. ನಗರದಲ್ಲಿ ಬಸವಣ್ಣನ ದೇವಾಲಯಗಳಿದ್ದು ನಿಧಿಯ ಆಸೆಗಾಗಿ ಹಾಳಾಗಿವೆ. ಹೆಸರಿಲ್ಲದ ಮರ ಬಿಸಿಲು ಬೀಳದ ಬಾವಿ ಇರುವ ಚೆಂದಾಲಿಂಗ ಮಳೆಗಾಲದಲ್ಲಿ ಮಾತ್ರ ಇಳಗೆ ಇಳಿವ ಜಿಲ್ಲೆಯ ಏಕೈಕ ಜಲಪಾತವಿರುವ ಕಬ್ಬರಗಿ 'ಅಭಿನವತಿರುಪತಿ' ಎಂದೇ ಹೆಸರಾದ ಪುರದಲ್ಲಿನ ಒಂದು ಕೋಟಿ, ಎಂಟು ಲಿಂಗಗಳ ತಾಣ. ಸುಮಾರು ಹನ್ನೆರಡು ಶಿಲಾಶಾಸನಗಳು ಉಗ್ರಾಣ ಶಿಲ್ಪಕಲೆಯ ತವರೂರಂತಿರುವ 'ಪುರ'ವು ಒಂದು ಪೌರಾಣಿಕ, ಧಾರ್ಮಿಕ, ಐತಿಹಾಸಿಕ ನೆಲೆಯನ್ನು ಹೊಂದಿದೆ. ಅದರಂತೆ ಚಂದ್ರಗಿರಿಯ ಚೆಂದಾಲಿಂಗೇಶ್ವರವು ಇಂದು ದಿವ್ಯ ನಿರ್ಲಕ್ಷ್ಯಕ್ಕೆ ಒಳಗಾದ ದೇವಾಲಯಗಳು ಅಥವಾ ಪ್ರವಾಸಿ ತಾಣಗಳ ಪಟ್ಟಿಯಲ್ಲಿ ಮೊದಲನೆಯ ಸ್ಥಾನದಲ್ಲಿರಬೇಕಾಗಿದೆ. ಏಕೆಂದರೆ ಅಲ್ಲಿನ ದೇಗುಲ (ದೇವರ) ನಿಧಿಯಿಲ್ಲದೇ ನಿಧಿಗಳ್ಳರಿಗೆ ಅಟ್ಟಹಾಸದ ತಾಣವಾಗಿದೆ. ಈ ದೇವಾಲಯದ ಆವರಣದಲ್ಲಿರುವ ನಾಲ್ಕು ಅಡಿ ಎತ್ತರದ ಗಣೇಶನ ವಿಗ್ರಹವು ನಾಶವಾಗಿದೆ.

ಯಲಬುರ್ಗಾ ತಾಲೂಕು ಅತಿಸಣ್ಣ ಹಾಗೂ ಹಿಂದುಳಿದ ಪ್ರದೇಶವೆಂಬ ಹಣೆಪಟ್ಟಿ ಪಡೆದರೂ ಐತಿಹಾಸಿಕ ಸ್ಮಾರಕಗಳಲ್ಲಿ ಭವ್ಯ ಶ್ರೀಮಂತಿಕೆಯನ್ನು ಪಡೆದುಕೊಂಡಿದೆ. ವಿಶೇಷ ಈ ತಾಲೂಕು ಅಚ್ಚರಿ ನಿರ್ಮಿತಿಯ ಅಪೂರ್ವ ದೇವಾಲಯಗಳನ್ನು ಹೊಂದಿರುವುದು ಗಮನಾರ್ಹವಾಗಿದೆ. ಕಲ್ಲೇಶ್ವರ,

ನವಲಿಂಗೇಶ್ವರ, ಮಹಾಮಾಯಿ, ಮಲ್ಲಿಕಾರ್ಜುನ ದೇವಾಲಯಗಳು ಪ್ರಮುಖವೆನಿಸಿವೆ. ಕುಕನೂರಿನ ಮಲ್ಲಿಕಾರ್ಜುನ ದೇವಾಲಯವು ಕೆಂಪು ಮರಳು ಶಿಲೆಯಲ್ಲಿ ನಿರ್ಮಾಣವಾದ ಈ ದೇವಾಲಯ ಭಗ್ನಗೊಂಡಿದೆ. ಈ ದೇವಾಲಯದ ಹತ್ತಿರ ಭೋಗೇಶ್ವರ ದೇವಾಲಯವೊಂದಿದೆ ಹಾಳಾದ ಸ್ಥಿತಿಯಲ್ಲಿರುವ ಇದು ಗರ್ಭಗುಡಿ, ಅಂತರಾಳ, ಸಭಾಮಂಟಪಗಳಿಂದ ಕೂಡಿದೆ. ಇನ್ನೊಂದು ಐತಿಹಾಸಿಕ ಸ್ಥಳವಾದ ಮುಧೋಳ ಗ್ರಾಮವು ಹಲವು ದೇವಾಲಯಗಳನ್ನು ಹೊಂದಿದೆ. ಇಲ್ಲಿನ ಮಲ್ಲಿಕಾರ್ಜುನ ದೇವಾಲಯದ ಮುಂದಿನ ಮಂಟಪದ ಗೋಡೆ ಈ ತೆರನಾಗಿರದೆ ಸರಳವಾಗಿದೆ. ಆದರೂ ಪ್ರಸ್ತಾರದ ಮೇಲ್ಭಾಗವು ನಾಶಗೊಂಡಿದೆ. ಹೀಗೆ ಕೊಪ್ಪಳ ಜಿಲ್ಲೆಯ ಐತಿಹಾಸಿಕ ಸ್ಥಳಗಳ ಇಂದಿನ ಸ್ಥಿತಿಗತಿಯನ್ನು ನೋಡಿದರೆ ಪ್ರತಿಯೊಂದು ಸ್ಥಳದ ಸ್ಮಾರಕಗಳು ಒಂದಿಲ್ಲದ ಒಂದು ಸಮಸ್ಯೆಯ ನಡುವೆ ರಕ್ಷಣೆಯಿಲ್ಲದೆ ದಿವ್ಯ ನಿರ್ಲಕ್ಷ್ಯ ಭಾವನಗೆ ಒಳಗಾಗಿವೆ.

**ಆಗಬೇಕಾದ ಕಾರ್ಯಗಳು ಮಾಡಬೇಕಾದ ಕೆಲಸಗಳು :**

ಕೊಪ್ಪಳ ಜಿಲ್ಲೆಯ ಐತಿಹಾಸಿಕ ಸ್ಥಳಗಳನ್ನು ಅರಿತುಕೊಂಡಾಗ ಅವುಗಳ ದೈನ್ಯಸ್ಥಿತಿಯನ್ನು ತಲುಪಿವೆಯೆಂದು ತಿಳಿಯುತ್ತದೆ. ಈ ಐತಿಹಾಸಿಕ ಭವ್ಯ ಸಂಸ್ಕೃತಿಯ ಸ್ಮಾರಕಗಳಿಂದೇನು ಲಾಭ, ಅವುಗಳಿಂದ ನಾವು ಏನನ್ನು ಕಲಿಯಬೇಕಾಗಿದೆ. ಅವುಗಳ ನಮಗೆ ದಾರಿದೀಪದ ಪ್ರತೀಕಗಳಾಗಿವೆಯೇ? ಇವುಗಳ ಸಂರಕ್ಷಣೆಯಿಂದ ನಮಗೇನು ಪ್ರಯೋಜನವಾಗುತ್ತದೆ ಎಂಬ ಪ್ರಶ್ನೆಗಳು ಸಹಜವಾಗಿಯೇ ನಮ್ಮನ್ನು ಕಾಡುತ್ತವೆ. ಇಂಥ ಸನ್ನಿವೇಶದಲ್ಲಿ ಯಾವುದೇ ಸಂಸ್ಕೃತಿಯನ್ನು ಪೋಷಿಸುತ್ತಾ ಹೋದರೆ ಅದು ಮುಂದಿನ ಯುವ ಪೀಳಿಗೆಗೆ ಮಾದರಿಯಾಗುತ್ತದೆ. ಅದರಂತೆ ಈ ಐತಿಹಾಸಿಕ ಸ್ಥಳಗಳಿಂದ ಇದರ ಮಹತ್ವ ಇದರ ಸಂಸ್ಕೃತಿಯನ್ನು ತಿಳಿದುಕೊಂಡಾಗ ನಮ್ಮ ದೈನಂದಿನ ಬದುಕಿಗೆ ನಡೆ ಆಚಾರ, ವಿಚಾರಗಳ ಮಮತೆ ವಿಶ್ವಾಸದ ಪ್ರಜ್ಞೆಗಳು ಆದರ್ಶ ಮೌಲ್ಯಗಳು, ನೈಜ ಸ್ವರೂಪದ ಇತಿಹಾಸವು ನಮ್ಮ ಭವಿಷ್ಯತ್ತನ್ನು ರೂಪಿಸಿಕೊಡುತ್ತದೆ. ಆದ್ದರಿಂದ ನಮ್ಮ ಜಿಲ್ಲೆಯ ಐತಿಹಾಸಿಕ ಸ್ಮಾರಕಗಳನ್ನು ರಕ್ಷಣೆ ಅವುಗಳಿಗೆ ಸೂಕ್ತವಾದ ಭದ್ರತೆಯನ್ನು ಒದಗಿಸುವುದು ಎಲ್ಲರ ಕರ್ತವ್ಯವೆಂದು ಭಾವಿಸಬೇಕಾಗುತ್ತದೆ. ಇಂಥ ಐತಿಹಾಸಿಕ ಸ್ಮಾರಕಗಳನ್ನು ರಕ್ಷಣೆ ಮಾಡುವುದು ಸರಕಾರದ ಕೆಲಸ ಎಂದು ಯಾರಾದರೂ ಹೇಳಬಹುದು ಆದರೆ ಹೀಗೆ ಹೇಳಿ ಜಾರಿಕೊಳ್ಳುವುದು ಜವಾಬ್ದಾರಿಯಿಂದ ತಪ್ಪಿಸಿಕೊಂಡಂತೆ. ಭವ್ಯವಾದ ಗುಡಿಗಳು, ಹಿಂದೂ-ಮುಸ್ಲಿಮರ ಭಾವೈಕ್ಯತಾಣಗಳು ಸುಂದರವಾದ ಶಿಲ್ಪಗಳು ಊರಿನ ಚರಿತ್ರೆಯನ್ನು ಸಾರುವ ಕಲ್ಲುಗಳು ನಮ್ಮ ಪ್ರದೇಶದ ಆಸ್ತಿಯೆಂದು ಭಾವಿಸಬೇಕು. ಅವುಗಳನ್ನು ರಕ್ಷಿಸುವುದು ಪ್ರತಿಯೊಬ್ಬನ ಅಭಿಮಾನಾಸ್ಪದವಾದ ಕರ್ತವ್ಯವೆಂದು ತಿಳಿದುಕೊಳ್ಳಬೇಕಾಗಿದೆ.

**ಸರಕಾರವು ಐತಿಹಾಸಿಕ ಸ್ಮಾರಕಗಳ ಸಂರಕ್ಷಣೆಗೆ ಕೈಗೊಳ್ಳಬೇಕಾದ ಕ್ರಮಗಳು :**

೧. ಕೊಪ್ಪಳ ನಗರದ ಕೋಟೆ ಹಾಗೂ ಇತರ ಪ್ರದೇಶಗಳಲ್ಲಿರುವ ಕೋಟೆಗಳ ದುರಸ್ತಿ ಕಾರ್ಯ ತುರ್ತಾಗಿ ಆಗಬೇಕಾಗಿದೆ. ಜೊತೆಗೆ ನಗರದ ಕೋಟೆಯ ಸುತ್ತಮುತ್ತಲಿನಲ್ಲಿ ನೆಲೆಸಿರುವ ಮನೆಗಳನ್ನು ಬೇರೆ ಕಡೆಗೆ ಸ್ಥಳಾಂತರಗೊಳಿಸಿ ಆ ಸ್ಥಳದಲ್ಲಿ ಬೃಂದಾವನ ನಿರ್ಮಿಸಿ ಪ್ರೇಕ್ಷಣೀಯ ಸ್ಥಳವನ್ನಾಗಿ ಮಾಡಬೇಕು.

೨. ನಿರ್ಲಕ್ಷಿತಗೊಂಡಿರುವ ದೇವಾಲಯಗಳಾಗಲಿ, ಶಾಸನಗಳಾಗಲಿ, ಸ್ಮಾರಕಗಳಾಗಲಿ ಅಥವಾ ಪ್ರಕೃತಿ ವಿಕೋಪಕ್ಕೆ ಗುರಿಯಾದ ಸ್ಮಾರಕಗಳನ್ನು ಸರಕಾರವು ಜೀರ್ಣೋದ್ಧಾರ ಮಾಡುವುದು ಅತ್ಯಂತ ಸೂಕ್ತವಾದ ಕೆಲಸವಾಗಿದೆ.

೩. ನೈಜತೆಯ ಚಿತ್ರಣವನ್ನು ಹೊಂದಿರುವ ಮತ್ತು ಭದ್ರತೆಯನ್ನು ಹೊಂದಿರುವಂತಹ ಸ್ಮಾರಕಗಳಿಗೆ ನೈಜ ಚಿತ್ರಣವನ್ನು ಅಳಿಸಿ ಹೊಸ ನವೀನ ಮಾದರಿಯಲ್ಲಿ ಆಧುನೀಕರಣಗೊಳಿಸುವುದನ್ನು ಬಿಟ್ಟು ಯಥಾಸ್ಥಿತಿಯನ್ನು ಕಾಪಾಡಿಕೊಂಡು ಹೋಗುವುದು.

೪. ಕೇವಲ ಐತಿಹಾಸಿಕ ಮಹತ್ವವನ್ನು ಪಡೆದುಕೊಂಡಿರುವ ಸ್ಮಾರಕಗಳಿಗೆ ಸೂಕ್ತ ಭದ್ರತೆಯನ್ನು ಒದಗಿಸಿದಂತೆ ಇತರ ಐತಿಹಾಸಿಕ ಸ್ಮಾರಕಗಳಿಗೆ ಮಹತ್ವವನ್ನು ನೀಡಬೇಕು.

೫. ಕೊಪ್ಪಳ ನಗರದ ಐತಿಹಾಸಿಕದ ಪ್ರತಿಬಿಂಬವೆಂದು ಕರೆಯುವ ಹುಲಿಕೆರೆಯು ಇಂದು ಅದಕ್ಕೆ ಸೂಕ್ತವಾದ ಯೋಜನೆಗಳನ್ನು ಕೈಗೊಂಡು ಆ ಸ್ಥಳದ ಸುತ್ತಮುತ್ತ ಹೂದೋಟಗಳನ್ನು ನಿರ್ಮಿಸಿ ಪ್ರವಾಸಿ ತಾಣಗಳನ್ನಾಗಿ ಮಾಡಬೇಕು.

೬. ಸಾಂಸ್ಕೃತಿಕ ಕೇಂದ್ರವಾದ ಕೊಪ್ಪಳ ಜಿಲ್ಲೆಯು ಅಷ್ಟೆ ಐತಿಹಾಸಿಕ ಪ್ರಸಿದ್ಧ ಸ್ಥಳವಾಗಿದ್ದು ಪ್ರವಾಸಿ ತಾಣವಾಗಿ ಮಾಡಬೇಕಾಗಿದೆ.

೭. ಈ ಪ್ರದೇಶದ ಕೋಟೆಕೊತ್ತಲಗಳಂತಹ ನಿರ್ಜನ ಪ್ರದೇಶದಲ್ಲಿನ ದೇವಾಲಯಗಳ ನಿರ್ಲಕ್ಷ್ಯ ಭಾವನೆಗೆ ಒಳಪಟ್ಟಂತಹ ಸ್ಮಾರಕಗಳಲ್ಲಿ ಮಾನವನ ಅನೈತಿಕ ಚಟುವಟಿಕೆಗಳಿಗೆ ಸರಕಾರವು ಸೂಕ್ತ ಕ್ರಮಗಳನ್ನು ಕೈಗೊಂಡು ಭದ್ರತೆಯನ್ನು ಒದಗಿಸಬೇಕು.

೮. ಐತಿಹಾಸಿಕ ಸ್ಮಾರಕಗಳ ಬಗ್ಗೆ ನಾಗರಿಕರಿಗೆ ಇತಿಹಾಸದ ಪ್ರಜ್ಞೆಯನ್ನು ಮೂಡಿಸುವುದು.

೯. ಕೊಪ್ಪಳ ಇತಿಹಾಸ ಪ್ರಸಿದ್ಧ ಸ್ಥಳವಾಗಿದ್ದು ಪುರಾತತ್ವ ವಸ್ತು ಸಂಗ್ರಹಾಲಯದ ಅಗತ್ಯವಿದೆ.

೧೦. ಐತಿಹಾಸಿಕ ಸ್ಥಳಗಳಲ್ಲಿ ಸಾರ್ವಜನಿಕ ವಿಹಾರಕ್ಕೆ ಅನುಕೂಲವಾಗುವ ವನ ನಿರ್ಮಿಸಬೇಕು.

೧೧. ಈ ಪ್ರದೇಶದಲ್ಲಿ ಐತಿಹಾಸಿಕ ಸ್ಥಳಗಳಲ್ಲಿ ರಸ್ತೆಗಳ ದುರಸ್ತೀಕರಣ ತುರ್ತಾಗಿ ಆಗಬೇಕಾಗಿದೆ.

**ಸಾರ್ವಜನಿಕರು ಐತಿಹಾಸಿಕ ಸ್ಥಳಗಳ ಬಗ್ಗೆ ತಾಳಬೇಕಾದ ನಿಲುವುಗಳು**

೧. ಉಲ್ಲೇಖವಿರುವ ಶಾಸನಗಳ ಮೇಲೆ ಅಥವಾ ಐತಿಹಾಸಿಕ ಸ್ಮಾರಕಗಳ ಮೇಲೆ ಸಾರ್ವಜನಿಕರು ಅವಾಚ್ಯ ಶಬ್ಧಗಳನ್ನು ಉಲ್ಲೇಖಿಸುವುದರಿಂದ ಅದರ ನೈಜ ಇತಿಹಾಸವು ಮರೆಮಾಚುತ್ತದೆ.

೨. ಹೊಲ ಅಥವಾ ಗದ್ದೆಗಳಲ್ಲಿ ದೊರೆತ ಐತಿಹಾಸಿಕ ಶಾಸನಗಳಾಗಲಿ, ನಾಣ್ಯಗಳಾಗಲಿ, ಸ್ಮಾರಕಗಳ ಬಗೆಗೆಯಾಗಲಿ ಅವುಗಳನ್ನು ಸಂಬಂಧಪಟ್ಟ ಇಲಾಖೆಗಳಿಗೆ ತಂದುಕೊಟ್ಟರೆ ಚರಿತ್ರೆಯನ್ನು ಉಳಿಸಿದಂತಾಗುತ್ತದೆ.

೩. ಗುಡ್ಡ ಬೆಟ್ಟಗಳ ಹಾಗೂ ಇತರ ನಿರ್ಜನ ಪ್ರದೇಶಗಳಲ್ಲಿ ಶಾಸನಗಳ ಮತ್ತು ಸ್ಮಾರಕಗಳ ಮಹತ್ವ ಅರಿವಿಲ್ಲದೆ ಅವುಗಳನ್ನು ಒಡೆದು ಸಾಮಾನ್ಯ ಕಲ್ಲುಗಳಂತೆ ಮನೆ ನಿರ್ಮಾಣಕ್ಕೆ ಬಳಸುತ್ತಿದ್ದಾರೆ. ಇದು ಅಕ್ಷಮ್ಯ ಹಾಗೂ ಪ್ರಾಕ್ತನ ಇಲಾಖೆಯ ಕಾಯ್ದೆಯ ಪ್ರಕಾರ ಅಪರಾಧವಾದ್ದರಿಂದ ಇಂತಹ ಸ್ಮಾರಕಗಳನ್ನು ಸಂರಕ್ಷಿಸುವುದು ಅವಶ್ಯಕವು, ಕರ್ತವ್ಯವೂ ಆಗಿದೆ.

೪. ಐತಿಹಾಸಿಕ ಸ್ಥಳಗಳನ್ನು ಮತ್ತು ಸ್ಮಾರಕಗಳನ್ನು ಹಾಳುಗೆಡವದೇ ಅವುಗಳ ಸಂರಕ್ಷಣೆಯಲ್ಲಿ ಸಾರ್ವಜನಿಕರು ತಾಳುವ ನಿಲುವುಗಳು ಮಹತ್ವದ್ದಾಗಿದೆ.

೫. ನಮ್ಮ ಪ್ರದೇಶಕ್ಕೆ ವಿದ್ವಾಂಸರಾಗಲಿ, ಸಂಶೋಧಕರಾಗಲಿ, ಪುರಾತತ್ವ ಇಲಾಖೆಯವರಾಗಲಿ, ಕ್ಷೇತ್ರಕಾರ್ಯಕ್ಕೆ ಬಂದಾಗ ಸಾರ್ವಜನಿಕರು ಸ್ಥಳೀಯ ಚರಿತ್ರೆಯ ಮಾಹಿತಿ ನೀಡಿ ಸಹಕರಿಸಬೇಕು ಇದರಿಂದ ಈ ಜಿಲ್ಲೆಯ ಸಂಸ್ಕೃತಿಯನ್ನು ಪೋಷಿಸಿ ಬೆಳೆಸಿದಂತಾಗುತ್ತದೆ.

ಹೀಗೆ ಐತಿಹಾಸಿಕ ಸ್ಥಿತಿಯನ್ನು ಕೂಲಂಕಷವಾಗಿ ಚರ್ಚಿಸಿದಾಗ ಈ ಪ್ರದೇಶದ ಪ್ರತಿಯೊಂದು ಸ್ಥಳದ ಸ್ಮಾರಕವನ್ನು ರಕ್ಷಿಸುವುದು ಕೇವಲ ಸರಕಾರದ ಪುರಾತತ್ವ ಇಲಾಖೆಯ, ಇತಿಹಾಸ ತಜ್ಞರ ಹಾಗೂ ಸಂಶೋಧಕರಿಗಷ್ಟೇ ಸೀಮಿತಗೊಂಡಿಲ್ಲ. ಈ ಪ್ರದೇಶದ ಭವ್ಯ ಸಂಸ್ಕೃತಿಯ ಸ್ಮಾರಕಗಳು ನಮ್ಮ ಸ್ವಯಾರ್ಜಿತ ಆಸ್ತಿ ಎಂದು ತಿಳಿದುಕೊಂಡು ಸಂರಕ್ಷಣೆ ಮಾಡುವುದು ನಮ್ಮ ಕರ್ತವ್ಯವೆಂದು ಭಾವಿಸಬೇಕಾಗಿದೆ.

**ಟಿಪ್ಪಣೆಗಳು**

೧. ಡಾ.ಸಿ.ಮಹದೇವ, ಡಾ.ಎನ್.ಚಿನ್ನಸ್ವಾಮಿ ಸೋಸಲೆ, **ಹಂಪಿ ಅಂದು-ಇಂದು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬, ಪುಟ ೬೮-೬೯

೨. ಡಿ.ಎಸ್.ಅಶ್ವಥ, **ಕೊಪ್ಪಳ ಒಂದು ಸಾಂಸ್ಕೃತಿಕ ಅಧ್ಯಯನ**, (ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ), ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧, ಪುಟ ೭

೩. ಡಾ.ಎಸ್.ಎಂ.ವೃಷಭೇಂದ್ರಸ್ವಾಮಿ, (ಸಂ), **ಗವಿದೀಪ್ತಿ**, ಶ್ರೀ ಗವಿಸಿದ್ದೇಶ್ವರ ಕೃಪಾಪೋಷಿತ ವಿದ್ಯಾರ್ಥಿ ಬಳಗ, ಶ್ರೀ ಗವಿಮಠ ಕೊಪ್ಪಳ, ೧೯೭೬, ಪುಟ ೧೪೦

೪. ಅದೇ, ಪುಟ ೧೪೧

# ಆರು

## ಉಪಸಂಹಾರ :

ಕರ್ನಾಟಕದ ಚರಿತ್ರೆಯಲ್ಲಿ ಪ್ರಾಚೀನ ಕಾಲದಿಂದಲೂ ಕೊಪ್ಪಳ ಪ್ರದೇಶ ಪ್ರಾಮುಖ್ಯವಾಗಿದ್ದು ನಾಡಿನ ಸಂಸ್ಕೃತಿಗೆ ಮಹತ್ತರ ಕಾಣಿಕೆಯನ್ನು ನೀಡಿರುವ ಸಂಗತಿ ವಿವಿಧ ಚಾರಿತ್ರಿಕ ಮಾಹಿತಿಗಳಿಂದ ತಿಳಿದುಬರುತ್ತದೆ. ಇತಿಹಾಸಪೂರ್ವದ ಮಾನವನು ಈ ಪ್ರದೇಶದಲ್ಲಿ ತನ್ನ ಅಲೆಮಾರಿ ಜೀವನವನ್ನು ನಡೆಸುತ್ತಿದ್ದನೆಂಬ ಸಂಗತಿ ಅಲ್ಲಿ ದೊರಕಿರುವ ಶಿಲಾಯುಗ ಸಂಸ್ಕೃತಿಯ ಅವಶೇಷಗಳಿಂದ ತಿಳಿದುಕೊಳ್ಳಬಹುದಾಗಿದೆ. ಈ ಪ್ರದೇಶದ ಭವ್ಯ ಪರಂಪರೆ ಮತ್ತು ವೈವಿಧ್ಯಮಯ ಸಂಸ್ಕೃತಿಯನ್ನು ಹೊಂದಿದೆ. ಯುದ್ಧ ತಂತ್ರಕಲಾ ನೈಪುಣ್ಯತೆಗೆ ಸಾಕ್ಷಿಯಾಗಿ ಕೋಟೆಗಳಿವೆ. ಇಲ್ಲಿನ ಧರ್ಮಜ್ಯೋತಿಗಳು ಸಾಮರಸ್ಯದ ಜ್ಯೋತಿಗಳಾಗಿ ಬೆಳಗುತ್ತಿವೆ. ಶಾಸನಗಳ ಸುರಿಮಳೆ ಸುರಿದಿದೆ. ವಿಪುಲವಾದ ಕಲಾ ಸಂಪತ್ತನ್ನು ಹೊಂದಿದೆ. ಸಾಂಸ್ಕೃತಿಕವಾಗಿ, ಸಾಹಿತ್ಯಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ಧಾರ್ಮಿಕವಾಗಿ ವಿವಿಧ ಅರಸು ಮನೆತನಗಳಿಂದ ತನ್ನ ಭವ್ಯವಾದ ಐತಿಹಾಸಿಕ ಶ್ರೀಮಂತಿಕೆಯನ್ನು ಕಂಡುಕೊಂಡು ಉತ್ಖನನ ಹಾಗೂ ಸಂಶೋಧನೆಯ ಅಧ್ಯಯನಕ್ಕೆ ಆಸರೆಯಾಗಿದೆ.[1] ಅಂದು ಗವಿಗಳಲ್ಲಿ ದೊರೆತ ಪ್ರಾಗೈತಿಹಾಸಿಕದ ಪಳೆಯುಳಿಕೆಗಳ ಅಧ್ಯಯನದ ಆಧಾರದ ಮೇಲೆ ಮಾನವನು ಅಂದು ತನ್ನ ಬದುಕನ್ನು ಗವಿಗಳಿಂದಲೇ ಪ್ರಾರಂಭಿಸಿರುವನೆಂದು ನೈಸರ್ಗಿಕ ದಾಖಲೆಗಳಿಂದ ತಿಳಿದುಬರುತ್ತದೆ.

ಇತಿಹಾಸ ಪೂರ್ವ ಯುಗವು ಅಸ್ತಂಗತಗೊಂಡು ಇತಿಹಾಸದ ಉದಯಕಾಲ ಪ್ರಾರಂಭವಾದಂತೆ ಕೊಪ್ಪಳದಲ್ಲಿ ಸಾಂಸ್ಕೃತಿಕ ಚಟುವಟಿಕೆಗಳು ನಡೆದಿರುವ ಕುರುಹುಗಳು ಕಂಡುಬಂದಿವೆ. ನಾವು ಇದುವರೆಗೂ ಗಮನಿಸಿದ ಪ್ರಪಂಚದ ಯಾವುದೇ ಒಂದು ಪ್ರದೇಶದ ಸಾಂಸ್ಕೃತಿಕ ಕೊಡುಗೆಗೆ ಅಲ್ಲಿ ಆಳ್ವಿಕೆ ನಡೆಸಿದ ಅರಸು ಮನೆತನಗಳು ಹಾಗೂ ಸಾಮಾನ್ಯ ಜನರ ಪಾತ್ರ ಅತ್ಯಂತ ಮಹತ್ವದ್ದಾಗಿದೆ. ಈ ಹಿನ್ನೆಲೆಯಲ್ಲಿ ವಿಚಾರ ಮಾಡುವುದಾದರೆ, ಕರ್ನಾಟಕವು ಸೇರಿದಂತೆ ಭಾರತವನ್ನಾಳಿದ ವಿವಿಧ ಅರಸು ಮನೆತನಗಳು

ಇಲ್ಲಿನ ಸಾಂಸ್ಕೃತಿಕ ಪರಂಪರೆಯಲ್ಲಿ ತಮ್ಮ ಪ್ರಭಾವವನ್ನು ಹೆಚ್ಚಿಸುತ್ತಾ ಬಂದಿವೆ. ಮುಖ್ಯವಾಗಿ ಮೌರ್ಯರು, ಶಾತವಾಹನರು, ಗಂಗರು, ಕದಂಬರು, ರಾಷ್ಟ್ರಕೂಟರು, ಚಾಲುಕ್ಯರು, ಹೊಯ್ಸಳರು, ವಿಜಯನಗರದ ಅರಸರು, ಬಹಮನಿ ಸುಲ್ತಾನರು, ನಿಜಾಮರು, ಮೈಸೂರಿನ ಒಡೆಯರು ಮುಂತಾದ ಅರಸು ಮನೆತನಗಳು ಕೊಪ್ಪಳ ಸೇರಿದಂತೆ ಕರ್ನಾಟಕದ ಸಾಂಸ್ಕೃತಿಕ ಇತಿಹಾಸದಲ್ಲಿ ತಮ್ಮದೇ ಆದ ಕೊಡುಗೆಯನ್ನು ನೀಡಿವೆ. ಹೀಗೆ ಕೊಪ್ಪಳ ಜಿಲ್ಲೆಯ ಚರಿತ್ರೆಯ ಬಗೆಗಿರುವ ಶಾಸನಗಳು, ಸ್ಮಾರಕಗಳು ಹಾಗೂ ಇತರ ದಾಖಲೆಗಳ ಅಧ್ಯಯನದಿಂದ ತಿಳಿದುಬರುತ್ತದೆ.

ಶಾಸನಗಳ ಅಧ್ಯಯನದಲ್ಲಿ ನಡೆಯುವ ಸಾಮಾಜಿಕ ಚಿಂತನೆಯ ಜೊತೆಗೆ ರಾಜಕೀಯೇತರ ವಿಷಯಗಳನ್ನು ಶೋಧಿಸುವ, ವಿಶ್ಲೇಷಿಸುವ ಅಂಶಗಳನ್ನು ಒಳಗೊಂಡಿದೆ. ಹೀಗೆಯೇ ಈ ಸ್ಮಾರಕಗಳು ಜನಜೀವನದಿಂದ ಮೂಡಿ ಬಂದಿರುವ ವಿವಿಧ ಮಾಹಿತಿಗಳನ್ನು ಗ್ರಹಿಸುವ ಮೂಲಕ ವೈವಿಧ್ಯಪೂರ್ಣ ಸಂಗತಿಗಳನ್ನು ಅಭ್ಯಸಿಸಿ, ವಿಷಯವನ್ನು ವೈಭವ ಹಾಗೂ ವಾಸ್ತುಶಿಲ್ಪ ಶ್ರೀಮಂತಿಕೆ, ಆಳಿದ ಅರಸು ಮನೆತನ ಆಡಳಿತ ನಡೆಸಿದ ರೀತಿ, ಇಲ್ಲಿನ ಸಾಹಿತ್ಯಿಕ ಮಹತ್ವಗಳನ್ನು ಗುರುತಿಸಬಹುದಾಗಿದೆ.[೨] ಇಲ್ಲಿನ ಚರಿತ್ರೆಯಲ್ಲಿನ ಕೆಲವೊಂದು ಸಂದೇಹಗಳನ್ನು ಬಗೆಹರಿಸುವಲ್ಲಿ ಕೊಪ್ಪಳ ಜಿಲ್ಲೆಯ ಸಾಂಸ್ಕೃತಿಕ ದಾಖಲೆಗಳು ಪ್ರಮುಖ ಪಾತ್ರವಹಿಸಿವೆ.

ಕರ್ನಾಟಕದ ಹಲವು ರಾಜಮನೆತಗಳು, ಅನುಸರಿಸಿಕೊಂಡು ಬಂದ ಆರ್ಥಿಕ ವ್ಯವಸ್ಥೆಯನ್ನು ಕೊಪ್ಪಳ ಪ್ರದೇಶವನ್ನಾಳಿದ ಅರಸು ಮನೆತನಗಳು ಮುಂದುವರೆಸಿಕೊಂಡು ಬಂದವರಾಗಿದ್ದಾರೆ. ಅಂದಿನ ಆರ್ಥಿಕ ವ್ಯವಸ್ಥೆಯಲ್ಲಿ ಭೂಮಿಯ ಪ್ರಕಾರಗಳನ್ನು ಹಾಗೂ ಭೂಮಿಯನ್ನು ದಾನ ಬಿಟ್ಟ ವಿವರಗಳನ್ನು ಚರ್ಚಿಸಿ, ಇದರೊಂದಿಗೆ ವ್ಯವಸಾಯ, ನೀರಾವರಿ, ಕೈಗಾರಿಕಾ ಉತ್ಪನ್ನಗಳು, ವ್ಯಾಪಾರ ಮಾರ್ಗ, ಸಂತೆ, ಸುಂಕ ಹಾಗೂ ಆರ್ಥಿಕ ಅಭಿವೃದ್ಧಿಗಾಗಿ ವ್ಯಾಪಾರೋದ್ಯಮವನ್ನು ಬೆಳೆಸುವಲ್ಲಿ ಅವರಿಗಿದ್ದ ಹೊಣೆಗಾರಿಕೆಯನ್ನು ಕುರಿತು ಇಲ್ಲಿ ಅಧ್ಯಯನ ನಡೆಸಲಾಗಿದೆ.

ಧರ್ಮವು ಅಂದಿನ ಕಾಲದ ರಾಜ್ಯಾಡಳಿತದಲ್ಲಿ ಪ್ರಮುಖ ಪಾತ್ರವಾಗಿತ್ತು. ಕರ್ನಾಟಕದಲ್ಲಿಯೂ ಪ್ರಾಚೀನ ಕಾಲದಿಂದಲೂ ಅನೇಕ ಧರ್ಮಗಳು ಹುಟ್ಟಿ ಪ್ರಭಾವ ಬೀರಿದ ನಿದರ್ಶನಗಳಿವೆ. ಅವುಗಳಲ್ಲಿ ಬೌದ್ಧ, ಜೈನಧರ್ಮಗಳು ಪ್ರಮುಖವೆನಿಸಿವೆ. ನಂತರದಲ್ಲಿ ತತ್ವ ಮತ್ತು ನಿಯಮಗಳನ್ನು ರೂಢಿಸಿಕೊಂಡು ಅಸ್ತಿತ್ವಕ್ಕೆ ಬಂದ ವೈಷ್ಣವಧರ್ಮ ಹಾಗೂ ವೀರಶೈವ ಧರ್ಮ ಮತ್ತು ಇಸ್ಲಾಂ ಧರ್ಮಗಳು ಇಲ್ಲಿ ಅಚ್ಚಳಿಯದ ಪ್ರಭಾವ ಬೀರಿದ್ದನ್ನು ಶಾಸನಗಳಲ್ಲಿ ಉಲ್ಲೇಖಿಸಿರುವುದನ್ನು ಕಾಣಬಹುದಾಗಿದೆ.[೩]

ಈ ಜಿಲ್ಲೆಯ ಶಾಸನಗಳ ಹಾಗೂ ಇತರೆ ದಾಖಲೆಗಳಿಂದ ಪ್ರದೇಶದ ಕೆಲವು ಅಗ್ರಹಾರಗಳ ಬಗ್ಗೆ ಮಾಹಿತಿಯು ಲಭ್ಯವಾಗುತ್ತದೆ. ಮಾದಿನೂರು, ಅಳವಂಡಿ, ಕೌಲೂರು, ಕುಕನೂರು, ತಳಕಲ್, ಇಟಗಿ ಮುಂತಾದವುಗಳು ಪ್ರಾಚೀನ ಕಾಲದ ಅಗ್ರಹಾರಗಳಾಗಿದ್ದವು. ಅಗ್ರಹಾರಗಳಂತೆ ಬ್ರಹ್ಮಪುರಿ, ದತ್ತ ಗ್ರಾಮಗಳು ಶಿಕ್ಷಣದ ಪ್ರಮುಖ ನೆಲೆಗಳಾಗಿದ್ದವು. ಇವುಗಳ ಮೂಲಕ ಅಂದಿನ ಕಾಲದ ಪ್ರಾಥಮಿಕ

ಶಿಕ್ಷಣ ಪದ್ಧತಿಯ ಸ್ವರೂಪ ವ್ಯವಸ್ಥೆ ಮುಂತಾದ ವಿವರಗಳೊಂದಿಗೆ ಅಂದಿನ ಕಾಲದಲ್ಲಿ ಶಿಕ್ಷಣವು ಸಮಾಜದಲ್ಲಿ ಎಷ್ಟು ಮಹತ್ವವನ್ನು ಪಡೆದಿತ್ತು ಎಂದು ತಿಳಿದುಕೊಳ್ಳಬಹುದಾಗಿದೆ.

ಪ್ರಾಚೀನ ಹಾಗೂ ಆಧುನಿಕ ಭಾರತೀಯ ಸಮಾಜದಲ್ಲಿ ಜಾತಿಪದ್ಧತಿಯು ಕಠಿಣ ರೂಪದಲ್ಲಿ ಜನ್ಮ ತಾಳಿದ್ದು, ಸಾಮಾಜಿಕ ಸ್ತರ ವಿನ್ಯಾಸದ ಒಂದು ವಿಶಿಷ್ಟ ಬಗೆಯಾಗಿದೆ. ಜಾತಿವ್ಯವಸ್ಥೆಯು ಸಾಮಾನ್ಯವಾಗಿ ಮಾನವ ಸಮಾಜದಲ್ಲಿ ಅನುವಂಶೀಯವಾಗಿ ಬೆಳೆದುಬಂದಿದೆ. ಜಾತಿಪದ್ಧತಿಯ ಆಧಾರದ ಮೇಲೆಯೇ ಅವರವರ ಸಂಸ್ಕೃತಿ ಅಂತಸ್ತು, ಲೋಕರೂಢಿಗಳು ಮತ್ತು ಬಹುಮುಖ್ಯವಾಗಿ ಕಾರ್ಯಗಳು ನಿರ್ಧರಿತವಾಗುತ್ತಿದ್ದವು. ಒಂದು ಜಾತಿಯಲ್ಲಿ ಹುಟ್ಟಿದ ವ್ಯಕ್ತಿ ಅದೇ ಜಾತಿಗೆ ಸಂಬಂಧಪಟ್ಟ ಸಂಸ್ಕೃತಿ, ಅಂತಸ್ತು, ಕಾಯಕಗಳನ್ನು ಮಾಡಬೇಕಾಗುತ್ತಿತ್ತೇ ಹೊರತು, ಬೇರೆ ಜಾತಿಗೆ ಸೇರಿದ ಕಾಯಕ ಸಂಸ್ಕೃತಿಗಳನ್ನು ಆಚರಿಸುವಂತಿರಲಿಲ್ಲ. ಆದರೆ ಇಂದಿನ ಸಮಾಜದಲ್ಲಿ ಪ್ರಾಚೀನ ವ್ಯವಸ್ಥೆಯ ಪದ್ಧತಿಗಳು ಹಂತ ಹಂತವಾಗಿ ಬದಲಾಗುತ್ತಿದೆ. ತಮ್ಮ ಪ್ರತಿಭೆಯಿಂದ ಯಾವುದೇ ಸಮೂಹಕ್ಕೆ ಸಂಬಂಧಪಟ್ಟ ವೃತ್ತಿಯಾಗಿರಲಿ ಉನ್ನತ ಸ್ಥಾನಕ್ಕೆ ಹೋಗುವ ವ್ಯವಸ್ಥೆಯು ಬೆಳೆದುಬಂದಿದೆ. ಈ ಪದ್ಧತಿಯು ಕ್ರಮಬದ್ಧವಾದ ಸಾಮಾಜಿಕ ಏಣಿ ಶ್ರೇಣಿಯಾಗಿದ್ದು, ಈ ಜಾತಿ ವ್ಯವಸ್ಥೆಯನ್ನು ಚತುರ್ವರ್ಣಗಳಿಂದ ವಿಭಾಗಿಸಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ವರ್ಣಗಳಾಗಿ ವಿಭಾಗಿಸಲಾಗಿತ್ತು.[೪] ಭಾರತೀಯ ಹಿಂದೂ ಸಮಾಜವು ಅಸಂಖ್ಯಾತ, ಜಾತಿ-ಉಪಜಾತಿಗಳಿಂದ ವಿಭಾಗಗೊಂಡಿದ್ದು, ಜೀವನದ ಎಲ್ಲ ರಂಗಗಳಲ್ಲಿಯೂ ಜಾತಿ ಹಾಸುಹೊಕ್ಕಾಗಿ ಪರಿಣಮಿಸುವಂತಾಯಿತು.

ಮೊದಲನೆಯ ಅಧ್ಯಾಯದಲ್ಲಿ ಕೊಪ್ಪಳ ಜಿಲ್ಲೆಯನ್ನು ತಾತ್ವಿಕ ಹಾಗೂ ಮೌಖಿಕ ಇತಿಹಾಸದ ಜೊತೆಗೆ ಇಂದು ಹೆಮ್ಮರವಾಗಿ ಬೆಳೆಯುತಿರುವ ಜಾಗತೀಕರಣ, ಕೈಗಾರಿಕೀಕರಣ, ಬಹು ರಾಷ್ಟ್ರೀಯ ಕಂಪನಿಗಳಿಂದ ಐತಿಹಾಸಿಕ ಸ್ಮಾರಕಗಳು ಪ್ರಾದೇಶಿಕ ಭಾಷೆಗಳು ಯಾವ ಸ್ಥಿತಿಯನ್ನು ತಲುಪಿವೆ ಇವುಗಳಿಂದಾಗುವ ಪರಿಣಾಮಗಳಿಂದ ನಮ್ಮ ಸಂಸ್ಕೃತಿಯನ್ನು ಪ್ರಸ್ತುತವಾಗಿ ಇಂದಿನ ವಿದ್ಯಮಾನಗಳಲ್ಲಿ ಹೇಗೆ ರಕ್ಷಿಸಿಕೊಳ್ಳಬೇಕೆಂಬುದನ್ನು ವಿವರಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಕರ್ನಾಟಕದ ಚರಿತ್ರೆಯಲ್ಲಿ ಕೊಪ್ಪಳ ಜಿಲ್ಲೆಯು ಸುಮಾರು ಎರಡು ಸಾವಿರ ವರ್ಷಗಳಷ್ಟು ಹಿಂದಿನ ಚರಿತ್ರೆಯನ್ನು ಹೊಂದಿದ್ದು ಪ್ರಸ್ತುತ ಸನ್ನಿವೇಶದಲ್ಲಿ ಐತಿಹಾಸಿಕ ಸಂಸ್ಕೃತಿಯ ಪರಂಪರೆಯಿಂದ ನಮ್ಮ ಗತಕಾಲದ ಆದರ್ಶಗುಣಗಳನ್ನು ಅಳವಡಿಸಿಕೊಂಡ ಹಿಂದೂ-ಮುಸ್ಲಿಮರು ಭಾವೈಕ್ಯ ತಾಣಗಳು ಇಂದು ಸಹಬಾಳ್ವೆಗೆ ಮಾದರಿಯಾಗಿವೆ. ಈ ಪ್ರದೇಶವು ವಿಭಿನ್ನ ಸಂಸ್ಕೃತಿಯನ್ನು ಹೊಂದಿದ್ದು ಧಾರ್ಮಿಕ ಸಂಪ್ರದಾಯಗಳ ಆಚರಣೆಯಲ್ಲಿ ಹಬ್ಬ, ಉತ್ಸವ, ಜಾತ್ರೆ, ಉರುಸುಗಳನ್ನು ಎಲ್ಲಾ ಸಮಾಜದವರು ಆಚರಿಸುವ ಪದ್ಧತಿಯನ್ನು ಇಂದಿಗೂ ರೂಢಿಸಿಕೊಂಡಿದ್ದಾರೆ.

ಆದರೆ ಇತ್ತೀಚಿನ ದಿನಗಳಲ್ಲಿ ಭಯೋತ್ಪಾದನೆ, ಧಾರ್ಮಿಕ ಸಂಘಟನೆಗಳು ಹಾಗೂ ಮೂಲಭೂತವಾದಿಗಳ ವೈಯಕ್ತಿಕ ಸ್ವಾರ್ಥ ನಿಲುವುಗಳಿಂದ ನಮ್ಮ ಐತಿಹಾಸಿಕ ಸ್ಮಾರಕಗಳು ವಿನಾಶದ

ಅಂಚಿನತ್ತ ಸಾಗುತ್ತಿವೆ. ಜೊತೆಗೆ ನೈಜ ಇತಿಹಾಸವನ್ನು ತಿರುಚುವ ಕಾರ್ಯಗಳು ಆರಂಭವಾಗಿವೆ. ಈ ಎಲ್ಲಾ ಧೋರಣೆಗಳನ್ನು ವಿಫಲಗೊಳಿಸಿ ಇತಿಹಾಸದ ಪ್ರಜ್ಞೆಯನ್ನು ಮೂಡಿಸುವುದು ಪ್ರತಿಯೊಬ್ಬರ ಕರ್ತವ್ಯವೆಂದು ಭಾವಿಸಿ ಇದರ ಬಗ್ಗೆ ಇಲ್ಲಿ ಚರ್ಚಿಸಲಾಗಿದೆ.

ಹಾಗೆಯೇ ಮೂರನೆಯ ಅಧ್ಯಾಯದಲ್ಲಿ ಕೊಪ್ಪಳ ಪ್ರದೇಶದ ಇತಿಹಾಸವು ಆರಂಭವಾಗುವುದು ಮೌರ್ಯರ ಆಳ್ವಿಕೆಯಿಂದ ಹಿಡಿದು ನಿಜಾಮರ ಆಳ್ವಿಕೆಯವರೆಗೂ ತನ್ನದೇ ಆದ ದಾಖಲೆಗಳಿಂದ ಚಾರಿತ್ರಿಕ ಮಹತ್ವವನ್ನು ಪಡೆದುಕೊಂಡಿದೆ. ಈ ಜಿಲ್ಲೆಯ ಐತಿಹಾಸಿಕ ಪ್ರದೇಶಗಳಿಗೆ ಸಾಕ್ಷಿಯೆಂಬಂತೆ ಅಶೋಕನ ಎರಡು ಶಾಸನಗಳು, ಜೈನರ ಬಸದಿಗಳು, ಬೌದ್ಧ ವಿಹಾರಗಳು, ಕೋಟೆ ಕೊತ್ತಲುಗಳು, ದೇವಾಲಯಗಳು, ಈ ಪ್ರದೇಶದಲ್ಲಿ ಆಳ್ವಿಕೆ ಮಾಡಿದ ಅರಸರ ಆದರ್ಶ ಮೌಲ್ಯಗಳು ಜೊತೆಗೆ ವೀರತನದಿಂದ ಹೋರಾಡಿದ ವೀರಗಲ್ಲು ಶಾಸನಗಳು, ನಿಷಧಿ ಶಾಸನಗಳು, ಬ್ರಿಟೀಷರ ಹಾಗೂ ನಿಜಾಮರ ಆಳ್ವಿಕೆಯ ವಿರುದ್ಧ ಸಕ್ರಿಯವಾಗಿ ಹೋರಾಡಿದ ನಿದರ್ಶನಗಳು ಚಾರಿತ್ರಿಕ ದಾಖಲೆಗಳನ್ನು ಪರಾಮರ್ಶಿಸಿ ಇಲ್ಲಿ ಚರ್ಚಿಸಲಾಗಿದೆ. ಇದರಿಂದ ಅಂದಿನ ಕಾಲದ ಸಾಮೂಹಿಕ ಹೋರಾಟ ರಾಷ್ಟ್ರೀಯ ಭಾವನೆಯ ಅಂಶಗಳು ನಮಗೆ ಇಂದಿನ ವಿದ್ಯಮಾನಗಳಲ್ಲಿ ಅವುಗಳು ಪ್ರೇರಕ ಶಕ್ತಿ ಎಂದು ತಿಳಿದುಕೊಳ್ಳಬಹುದಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಈ ಪ್ರದೇಶವನ್ನು ದಕ್ಷಿಣ ಭಾಗದ ಸಂಸ್ಕೃತಿಯ ಮಹಾದ್ವಾರ ಎಂದು ಬಿಂಬಿಸಲಾಗಿದೆ. ಈ ಜಿಲ್ಲೆಯ ವಿವಿಧ ಪ್ರದೇಶಗಳ ಸಂಸ್ಕೃತಿಯನ್ನು ಆತ್ಮಾವಲೋಕನ ಮಾಡಿಕೊಂಡಾಗ ರಾಜಕೀಯವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ, ಧಾರ್ಮಿಕವಾಗಿ, ಶೈಕ್ಷಣಿಕವಾಗಿ, ಸಾಹಿತ್ಯಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಅತ್ಯಂತ ಮಹತ್ವವನ್ನು ಪಡೆದುಕೊಂಡ ಪ್ರದೇಶವಾಗಿದೆ. ಇಲ್ಲಿ ಐತಿಹಾಸಿಕವಾಗಿ ಹೇಳುವುದಾದರೆ ಅಶೋಕನ ಶಾಸನಗಳು, ಜೈನರ ಬಸದಿಗಳು, ಬೌದ್ಧ ವಿಹಾರಗಳು, ದೇವಾಲಯಗಳ ಚಕ್ರವರ್ತಿ ಎಂದು ಕರೆಯುವ ಇಟಗಿ ಮಹಾದೇವ ದೇವಾಲಯವು ಆನೆಗೊಂದಿಯ ಐತಿಹಾಸಕ ಸ್ಮಾರಕಗಳು, ಕನಕಗಿರಿಯ ಕನಕಾಚಲ ಲಕ್ಷ್ಮೀನರಸಿಂಹ ದೇವಾಲಯ, ಹೇಮಗುಡ್ಡದ ಐತಿಹಾಸಿಕ ಮಹತ್ವವನ್ನು ಸಾರುವ ಕೋಟೆ, ಕುಮ್ಮಟದುರ್ಗದ ಐತಿಹಾಸಿಕದ ಮಹತ್ವದ ಪುರ, ಚಂದ್ರಗಿರಿಯ ಐತಿಹಾಸಿಕ ಸ್ಮಾರಕಗಳು ಈ ಪ್ರದೇಶದ ಐತಿಹಾಸಿಕ ಮೌಲ್ಯಗಳನ್ನು ಎತ್ತಿಹಿಡಿಯುತ್ತವೆ. ಒಟ್ಟಾರೆಯಾಗಿ ಈ ಪ್ರದೇಶದ ಸಾಂಸ್ಕೃತಿಕ ನೋಟದಲ್ಲಿ ವಿಭಿನ್ನ ಸಂಸ್ಕೃತಿಯ ಪರಂಪರೆಯು ನಮ್ಮ ಜೀವನಕ್ಕೆ ಮಾದರಿ ಹಾಗೂ ಇಂದಿನ ಯುವ ಪೀಳಿಗೆಗೆ ಆದರ್ಶಗುಣಗಳ ಒಂದು ಪಾಠವೆಂದು ಭಾವಿಸಿಕೊಳ್ಳಲಾಗಿದೆಯೆಂದು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಅದರಂತೆ ಐದನೆಯ ಅಧ್ಯಾಯದಲ್ಲಿ ಈ ಪ್ರದೇಶದ ಐತಿಹಾಸಿಕ ಸ್ಥಿತಿಗತಿಗಳ ಬಗ್ಗೆ ವಿವರಿಸಲಾಗಿದೆ. ಯಾವುದೇ ಒಂದು ಸಂಸ್ಕೃತಿಯನ್ನು ಉಳಿಸಿಕೊಳ್ಳಬೇಕಾದರೆ ಅದನ್ನು ಪೋಷಿಸುವ ಪ್ರವೃತ್ತಿಯನ್ನು ಹೊಂದಿರಬೇಕು. ಅದರಂತೆ ನಮ್ಮ ಪ್ರದೇಶದ ಐತಿಹಾಸಿಕ ಭವ್ಯ ಸಂಸ್ಕೃತಿಯ

ಪರಂಪರೆಯನ್ನು ಸಾರುವ ಸ್ಮಾರಕಗಳು ಇಂದಿನ ಜಾಗತೀಕರಣ ಬಹುರಾಷ್ಟ್ರೀಯ ಕಂಪನಿಗಳಿಂದ ಹಾಗೂ ಕೈಗಾರಿಕೀಕರಣದಿಂದ ಅವುಗಳ ಇಂದಿನ ಸ್ಥಿತಿಗತಿಗಳು ಶೋಚನೀಯವಾಗಿ ಅಭದ್ರತೆಯ ಸ್ಥಾನವನ್ನು ಹೊಂದಿವೆ. ಸರಕಾರ ಸ್ಮಾರಕಗಳ ರಕ್ಷಣೆಗೆ ಕ್ರಮಗಳನ್ನು ಕೈಗೊಂಡಿದ್ದಾಗ್ಯೂ ಬಹಳಷ್ಟು ಸ್ಮಾರಕಗಳು ಅಳಿವಿನ ಅಂಚಿನಲ್ಲಿವೆ. ಇಂತಹ ಸನ್ನಿವೇಶದಲ್ಲಿ ಸರಕಾರ ನಾಗರಿಕರ ಸಹಕಾರವನ್ನು ಪಡೆದುಕೊಂಡು ರಕ್ಷಣೆಯ ಕಾರ್ಯದಲ್ಲಿ ತೊಡಗಬೇಕಾಗಿದೆ. ಚರಿತ್ರೆಯ ಬಹು ಅಮೂಲ್ಯ ಮಾಹಿತಿಗಳನ್ನು ಒಳಗೊಂಡಿರುವ ಇಂಥ ಸ್ಮಾರಕಗಳ ರಕ್ಷಣೆ ಪ್ರತಿಯೊಬ್ಬ ಕನ್ನಡಿಗನ ಆದ್ಯ ಕರ್ತವ್ಯವಾಗಿದೆ.

ಈ ದೃಷ್ಟಿಯಲ್ಲಿ ನನ್ನ ಸಂಶೋಧನೆ ವಿಷಯವನ್ನು ಕೇಂದ್ರಿಕರಿಸಿಕೊಂಡು ಮುನ್ನಡೆಯಾಗಿದೆ. ಮುಖ್ಯವಾಗಿ ವಿಷಯಕ್ಕೆ ಸಂಬಂಧಿಸಿದಂತೆ ಹಲವಾರು ದಾಖಲೆಗಳು, ಆಧಾರಗಳು ಪ್ರಕಟಗೊಂಡು ಚರ್ಚೆಗೆ ಒಳಗಾಗಿವೆ. ಆದರೆ ನನ್ನ ಅಧ್ಯಯನದ ಮುಖ್ಯ ಉದ್ದೇಶ ಎಂದರೆ ಈ ಜಿಲ್ಲೆಯ ಐತಿಹಾಸಿಕ ಸ್ಥಳಗಳ ಸ್ಥಿತಿ ಯಾವ ಹಂತವನ್ನು ತಲುಪಿವೆ. ಇಂತಹ ಸಂದರ್ಭದಲ್ಲಿ ಅವುಗಳನ್ನು ಯಾವ ರೀತಿ ಸಂರಕ್ಷಣೆ ಮಾಡಿಕೊಳ್ಳಬೇಕಾಗಿದೆ ಎಂಬುದರ ಬಗ್ಗೆ ಹೆಚ್ಚಿನ ಒತ್ತನ್ನು ನೀಡಲು ಹಂಬಲಿಸಲಾಗಿದೆ. ಕೆಳಸ್ತರದ ಚರಿತ್ರೆಗೆ ಹೆಚ್ಚು ಒತ್ತು ನೀಡುತ್ತಿರುವ ಇಂದಿನ ಸನ್ನಿವೇಶದಲ್ಲಿ ಇಂತಹ ಅಧ್ಯಯನಗಳು ಹೆಚ್ಚು ಮಹತ್ವವೆನಿಸುತ್ತದೆ. ಕೊಪ್ಪಳ ಜಿಲ್ಲೆಯ ಸಂಸ್ಕೃತಿಯ ಕುರಿತು ಇದುವರೆಗೂ ಬಂದಿರುವ ಸಂಶೋಧನಾತ್ಮಕ ಉಲ್ಲೇಖವಾದದ ವ್ಯಕ್ತಿಗಳನ್ನು ಸಂಶೋಧನಾ ಅವಧಿಯಲ್ಲಿ ಸಂದರ್ಶಿಸಿ ಆಧಾರವಾದದ ವ್ಯಕ್ತಿಗಳನ್ನು ಸಂಶೋಧನಾ ಅವಧಿಯಲ್ಲಿ ಸಂದರ್ಶಿಸಿ ಆಧಾರ ಸಮೇತವಾಗಿ ನಿರೂಪಿಸಲು ಬಯಸಿದ್ದೇನೆ. ಈ ಹಂತದಲ್ಲಿ ಸ್ವಲ್ಪ ಪ್ರಮಾಣದ ತೃಪ್ತಿ ಕಾಣುತ್ತೇನೆ. ಈ ವಿಷಯದ ಕುರಿತು ಅಧ್ಯಯನ ಮಾಡುವ ದೃಷ್ಟಿಕೋನಗಳು ಇನ್ನೂ ಹಲವಾರು. ನನ್ನ ಅಧ್ಯಯನ ಮತ್ತು ಕಾಲದ ಮಿತಿಯಿಂದಾಗಿ ಇಷ್ಟಕ್ಕೆ ಅಧ್ಯಯನವನ್ನು ಸೀಮಿತಗೊಳಿಸಿಕೊಂಡು ಅಂತಿಮಗೊಳಿಸಲಾಗಿದೆ.

**ಟಿಪ್ಪಣಿಗಳು**

೧. ಬಿ.ಸಿ.ಪಾಟೀಲ, **ಕೊಪ್ಪಳದ ಐತಿಹಾಸಿಕ**, ಗುಲ್ಬರ್ಗಾ ವಿಶ್ವವಿದ್ಯಾಲಯ, ೧೯೯೬, ಪುಟ ೦೧-೦೨

೨. ಸಿದ್ದಲಿಂಗಪ್ಪ ಕೊಟ್ನೆಕಲ್, **ಕೊಪ್ಪಳ ಜಿಲ್ಲೆಯ ಶಾಸನಗಳು: ಸಮಗ್ರ ಅಧ್ಯಯನ** (ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ), ಗುಲ್ಬರ್ಗಾ ವಿಶ್ವವಿದ್ಯಾಲಯ, ೨೦೦೬, ಪುಟ ೦೧-೦೨

೩. ಅದೇ, ಪುಟ ೦೭-೦೮

೪. ಅದೇ, ಪುಟ ೧೭೨

# ಪರಾಮರ್ಶನ ಗ್ರಂಥಗಳು


೧. ಪ್ರೊ.ಅಲ್ಲಮಪ್ರಭು ಬೆಟ್ಟದೂರು, ಎಚ್.ಎಸ್.ಪಾಟೀಲ, **'ಕೊಪ್ಪಳ ಜಿಲ್ಲಾ ದರ್ಶನ'**, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ೨೦೦೫

೨. ಡಾ.ಹಂಪ ನಾಗರಾಜಯ್ಯ **'ಕೊಪ್ಪಳ ಶಾಸನಗಳು'**, ರತ್ನತ್ರಯ ಪ್ರಕಾಶನ, ಕುವೆಂಪುನಗರ, ಮೈಸೂರು, ೧೯೯೮

೩. ಡಾ.ಟಿ.ಆರ್.ಚಂದ್ರಶೇಖರ, **'ಜಿಲ್ಲಾ ಅಭಿವೃದ್ಧಿ ಅಧ್ಯಯನ ಕೊಪ್ಪಳ'**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

೪. ಡಾ.ಎಸ್.ಎಂ.ವೃಷಭೇಂದ್ರ ಸ್ವಾಮಿ (ಸಂ), **'ಗವಿದೀಪ್ತಿ'**, ಪ್ರಕಾಶಕರು, ಶ್ರೀ ಗವಿಸಿದ್ದೇಶ್ವರ ಕೃಪಾಪೋಷಿತ ವಿದ್ಯಾರ್ಥಿ ಬಳಗ, ಶ್ರೀ ಗವಿಮಠ, ಕೊಪ್ಪಳ, ೧೯೭೬

೫. ಬಿ.ಸಿ.ಪಾಟೀಲ, **'ಕೊಪ್ಪಳ ಸಾಂಸ್ಕೃತಿಕ ಪರಂಪರೆ'**, ಹರಿಹರ ಪ್ರಕಾಶನ, ಕೊಪ್ಪಳ, ೧೯೯೮

೬. ಡಾ.ದೇವರಕೊಂಡಾರೆಡ್ಡಿ (ಸಂ), **'ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೨ ಕೊಪ್ಪಳ ಜಿಲ್ಲೆ'** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

೭. ಡಾ.ಕೆ.ಎಂ.ಸುರೇಶ (ಸಂ), **'ಕರ್ನಾಟಕ ದೇವಾಲಯ ಕೋಶ ಕೊಪ್ಪಳ ಜಿಲ್ಲೆ'**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩

೮. ಪ್ರೊ.ಲಕ್ಷ್ಮಣ ತೆಲಗಾವಿ (ಸಂ), **'ಸ್ಥಳೀಯ ಚರಿತ್ರೆ ಅಧ್ಯಯನದ ತಾತ್ವಿಕತೆ ಮತ್ತು ಸ್ವರೂಪ'**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩

೯. ಡಾ.ಬಿ.ವ್ಹಿ.ಶಿರೂರ, **'ಸಿದ್ಧಶ್ರೀ'**, ಶ್ರೀ ಸಿದ್ದರಾಮೇಶ್ವರ ಪ್ರಕಾಶನ, ಯಲಬುರ್ಗಾ, ೨೦೦೦

೧೦. ಡಾ.ಶ್ರೀನಿವಾಸ ರಿತ್ತಿ, **'ಅಶೋಕನ ಧರ್ಮಶಾಸನಗಳು'**, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೮

೧೧. ಡಾ.ಪುರುಷೋತ್ತಮ ಬಿಳಿಮಲೆ, **'ಹುಲಿಗೆಮ್ಮ'**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

೧೨. ಡಾ.ಸಿ.ಮಹದೇವ, ಡಾ.ಎನ್.ಚಿನ್ನಸ್ವಾಮಿ ಸೋಸಲೆ, **'ಹಂಪಿ ಅಂದು ಇಂದು'**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬

೧೩. ಡಾ.ಎಂ.ಚಿದಾನಂದಮೂರ್ತಿ, **'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ'**, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ೧೯೭೬

೧೪. ಅಲ್ಲಾಗಿರಿರಾಜ ಕನಕಗಿರಿ, **'ಪುಣ್ಯಕ್ಷೇತ್ರ ಕನಕಗಿರಿ'**, ಶ್ರೀರಾಮ ಪ್ರಕಾಶನ ಕನಕಗಿರಿ, ೨೦೦೬

೧೫. ಬಿ.ಸಿ.ಪಾಟೀಲ, **'ಕೊಪ್ಪಳದ ಐತಿಹಾಸಿಕತೆ'**, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ೧೯೯೬

೧೬. ಡಾ.ಶೀಲಾಕಾಂತ ಪತ್ತಾರ, **'ಬಾದಾಮಿ ಸಾಂಸ್ಕೃತಿಕ ಅಧ್ಯಯನ'**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೧೭. ಡಾ.ಚೆನ್ನಕ್ಕಪಾವಟೆ ಎಲಿಗಾರ, **'ಕರ್ನಾಟಕ ಸಂಸ್ಕೃತಿ: ಕೊಪ್ಪಳ'**, ಚೆನ್ನಗಂಗಾ ಪ್ರಕಾಶನ, ಧಾರವಾಡ, ೧೯೯೫

೧೮. ದೇಸಾಯಿ ಪಾಂಡುರಂಗರಾಯರು, **'ಶಾಸನ ಪರಿಚಯ'**, ಪ್ರಕಾಶಕರು ಕರ್ನಾಟಕ ಇತಿಹಾಸ ಸಂಶೋಧಕ ಮಂಡಲ, ಧಾರವಾಡ, ೧೯೫೬

೧೯. ಬಿ.ಸಿ.ಪಾಟೀಲ, **'ಕೊಪ್ಪಳದ ಹೆಚ್ಚಿನ ಶಾಸನಗಳು'**, ಹರಿಹರ ಪ್ರಕಾಶನ, ಕೊಪ್ಪಳ, ೧೯೯೮

೨೦. ಡಾ.ಪುರುಷೋತ್ತಮ ಬಿಳಿಮಲೆ, **'ಹಂಪಿ ಜಾನಪದ'**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೬

೨೧. ಡಾ. ಬಿ.ವ್ಹಿ.ಶಿರೂರ, **'ಕಲ್ಲಿನಾಥೇಶ್ವರ'**, ಶ್ರೀ ಕಲ್ಲಿನಾಥೇಶ್ವರ ಟ್ರಸ್ಟ್ ಕಮಿಟಿ ಕಲ್ಲೂರು, ೨೦೦೬

೨೨. ಬಿ.ಸಿ.ಪಾಟೀಲ, **'ಇದು ದೇವಾಲಯ ಚಕ್ರವರ್ತಿ'**, ಮಹಾದೇವ ದೇವಾಲಯ, ಹರಿಹರ ಪ್ರಕಾಶನ, ಕೊಪ್ಪಳ, ೨೦೦೧

೨೩. ಡಾ. ಜ್ಞಾನಾನಂದ, **'ಶಿಲ್ಪಾದರ್ಶ ಸಂಪುಟ ೨'**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

೨೪. ಕೆ.ಬಿ.ಶಿವತಾರಕ, **'ಕರ್ನಾಟಕ ಪುರಾತತ್ವ ನೆಲೆಗಳು'**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

೨೫. ಡಾ.ಎಚ್.ತಿಪ್ಪೇರುದ್ರಸ್ವಾಮಿ, **'ಕರ್ನಾಟಕ ಸಂಸ್ಕೃತಿ ಸಮೀಕ್ಷೆ'**, ಡಿ.ವಿ.ಕೆ ಮೂರ್ತಿ ಪ್ರಕಾಶನ, ಮೈಸೂರು, ೨೦೦೩

೨೬. ಕನ್ನಡ ಭಾಷೆ ಮತ್ತು ಸಾಹಿತ್ಯ ವಿಭಾಗದ ಯೋಜನೆ ೩, **'ಕರ್ನಾಟಕ ಕನ್ನಡಿ'**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

೨೭. ಡಾ.ಸಿ.ನಾಗಭೂಷಣ, **'ಶಾಸನಗಳು ಮತ್ತು ಕನ್ನಡ ಸಾಹಿತ್ಯ'**, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ೨೦೦೫

೨೮. ಶೇಷಶಾಸ್ತ್ರಿ ಆರ್., **'ಶಾಸನ ಪರಿಚಯ'**, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ೧೯೯೯

೨೯. ಚಂದ್ರಶೇಖರ ನಾರಾಯಣಪುರ, **'ಕರ್ನಾಟಕ ವೀರಶೈವ ಮಠಗಳು'**, ಗೆಳೆಯ ಪ್ರಕಾಶನ, ಚಿಕ್ಕಮಗಳೂರು, ೨೦೦೨

೩೦. ಟಿ.ಬಿ.ಕಲಘಟಗಿ, '**ಕರ್ನಾಟಕದಲ್ಲಿ ಜೈನಧರ್ಮ ಒಂದು ಅಧ್ಯಯನ**', ಜೈನಶಾಸ್ತ್ರ ಮತ್ತು ಪ್ರಾಕೃತ ವಿಭಾಗ, ಮೈಸೂರು ವಿಶ್ವವಿದ್ಯಾಲಯ, ೧೯೭೬

೩೧. ಪ್ರೊ.ಅಲ್ಲಮಪ್ರಭು ಬೆಟ್ಟದೂರು, ಎಚ್.ಎಸ್.ಪಾಟೀಲ, '**ತಿರುಳ್ಗನ್ನಡ**', ಸವಿಸಂಚಿಕೆ ಕೊಪ್ಪಳ, ೧೯೯೩

೩೨. ಡಾ.ಶರಬಸಪ್ಪ ಕೋಲ್ಕಾರ, '**ಅಕ್ಷಯ ಸವಿಸಂಚಿಕೆ**', ಗಂಗಾವತಿ ತಾಲೂಕು, ಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನ, ೨೦೦೨

೩೩. ಕೆ.ಶರಣ ಬಸಪ್ಪ ನಿಡಶೇಸಿ, '**ಕೃಷ್ಣಗಿರಿ ಸಾಹಿತ್ಯಸಿರಿ**', ಕುಷ್ಟಗಿ ತಾಲೂಕು, ದ್ವಿತೀಯ ಸಾಹಿತ್ಯ ಸಮ್ಮೇಳನ, ೨೦೦೨

೩೪. ಡಾ.ಚನ್ನಬಸವಯ್ಯ ಹಿರೇಮಠ, '**ಕುರುಗೋಡ ಸಿಂದರು ಒಂದು ಅಧ್ಯಯನ**', ಸಂಗಣ್ಣನವರು ಅಗಡಿ ಸಂಸ್ಕೃತಿ ಪ್ರತಿಷ್ಠಾನ, ಕೊಪ್ಪಳ, ೧೯೯೫

೩೫. ಆರ್.ಕೆ.ಸುಬೇದಾರ, ನಟರಾಜ ಸೋನಾರ, '**ಮಾನ್ಯಪುರ**', ಸ್ಮರಣ ಸಂಚಿಕೆ, ಕುಷ್ಟಗಿ ತಾಲೂಕು ತೃತೀಯ ಸಾಹಿತ್ಯ ಸಮ್ಮೇಳನ

೩೬. ಡಾ.ಶರಣಬಸಪ್ಪ ಕೋಲ್ಕಾರ, '**ಕಾಯಕಸಿರಿ ಸ್ಮರಣ ಸಂಚಿಕೆ**', ಗಂಗಾವತಿ, ೧೯೯೬

೩೭. ಮಹಾಂತೇಶ ಎಂ. ಕೊತಬಾಳ, '**ಕೊಪ್ಪಳ ಜಿಲ್ಲೆ ೫೦**', ಸ್ಮರಣ ಸಂಚಿಕೆ, ಸಾಹಿತ್ಯ ವೇದಿಕೆ ಕಲಾ ಬಳಗ, ಕೊಪ್ಪಳ, ೧೯೯೭

೩೮. ಗವೀಶ ಹಿರೇಮಠ, '**ಜಾನಪದ ಸಿರಿ**', ಸ್ಮರಣ ಸಂಚಿಕೆ, ಕೊಪ್ಪಳ ಜಿಲ್ಲಾ ಜಾನಪದ ಕಲಾಮೇಳ, ೨೦೦೫

೩೯. ಪ್ರೊ.ಎಸ್.ಎಸ್.ಹಿರೇಮಠ, '**ಕೊಪ್ಪಳ ಜಿಲ್ಲೆಯ ಜಾತ್ರೆಗಳು**', ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೦

೪೦. ಬಿ.ಸಿ.ಪಾಟೀಲ, '**ಮಾದಿನೂರು ನೆನಪು**', ಸ್ಮರಣ ಸಂಚಿಕೆ, ವಿಶಾಲ ಪ್ರಕಾಶನ, ಮಾದಿನೂರು, ೧೯೯೫

೪೧. ಡಾ.ಶಾಂತಿನಾಥ ದಿಬ್ಬದ, '**ಜೈನ ಸಂಸ್ಕೃತಿ ಸಮೀಕ್ಷೆ**', ರತ್ನತ್ರಯ ಪ್ರಕಾಶನ, ಗುಲಬರ್ಗಾ, ೨೦೦೩

೪೨. ಪ್ರೊ.ಹಿ.ಚಿ.ಬೋರಲಿಂಗಯ್ಯ (ಸಂ), '**ಕರ್ನಾಟಕ ಜಾನಪದ ಕಲೆಗಳ ಕೋಶ**', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೬

೪೩. ಡಾ.ಎನ್.ಚಿನ್ನಸ್ವಾಮಿ ಸೋಸಲೆ, '**ಕರ್ನಾಟಕ ರಾಜಕೀಯ ಚರಿತ್ರೆ ಮತ್ತು ಸಾಹಿತ್ಯ**', ಸಿ.ವಿ.ಜಿ. ಪಬ್ಲಿಕೇಶನ್ಸ್, ಬೆಂಗಳೂರು, ೨೦೦೧

೪೪. ಪ್ರೊ.ಲಕ್ಷ್ಮಣ್ ತೆಲಗಾವಿ, '**ಮೌರ್ಯ ಮತ್ತು ಶಾತವಾಹನ ಯುಗ**', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

೪೫. ಕೆ.ಅನಂತರಾಮ ರಾವ್, **'ಸುವರ್ಣ ಕರ್ನಾಟಕ ದರ್ಶನ'**, ವಿದ್ಯಾ ಪಬ್ಲಿಶಿಂಗ್ ಹೌಸ್, ಮಂಗಳೂರು, ೨೦೦೬

೪೬. ಬಿ.ಎಂ.ಚಂದ್ರಶೇಖರಯ್ಯ, **'ಕರ್ನಾಟಕ ಸಾಂಸ್ಕೃತಿಕ ಇತಿಹಾಸ ಪರಂಪರೆ'**, ಸಿ.ವಿ.ಜಿ. ಪಬ್ಲಿಕೇಶನ್ಸ್, ಬೆಂಗಳೂರು

೪೭. ಡಾ.ಎಂ.ಎಚ್.ಕೃಷ್ಣ, **'ಕರ್ನಾಟಕದ ಪೂರ್ವ ಚರಿತ್ರೆ'**, ಕನ್ನಡ ಸಂಶೋಧನೆ ಸಂಸ್ಥೆ, ಧಾರವಾಡ, ೧೯೫೩

೪೮. ಡಾ.ಎನ್.ಚಿನ್ನಸ್ವಾಮಿ ಸೋಸಲೆ, **'ನಮ್ಮ ಗ್ರಾಮಗಳು ಅಂದು-ಇಂದು'**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

**ಅಪ್ರಕಟಿತ ಗ್ರಂಥಗಳು**

೪೯. ಸಿದ್ದಲಿಂಗಪ್ಪ ಕೊಟ್ನೆಕಲ್, **'ಕೊಪ್ಪಳ ಜಿಲ್ಲೆಯ ಶಾಸನಗಳು ಸಮಗ್ರ ಅಧ್ಯಯನ'** (ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ), ಗುಲಬರ್ಗಾ ವಿಶ್ವವಿದ್ಯಾಲಯ, ೨೦೦೬

೫೦. ಡಿ.ಎಸ್.ಅಶ್ವಥ, **'ಕೊಪ್ಪಳ ಒಂದು ಸಾಂಸ್ಕೃತಿಕ ಪರಿಚಯ'** (ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

೫೧. ಗವಿಸಿದ್ದಪ್ಪ ಪಾಟೀಲ, **'ಕುಕನೂರು ಒಂದು ಸಾಂಸ್ಕೃತಿಕ ಅಧ್ಯಯನ'** (ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ), ಗುಲ್ಬರ್ಗಾ ವಿಶ್ವವಿದ್ಯಾಲಯ, ೨೦೦೩

**ಇಂಗ್ಲಿಷ್ ಗ್ರಂಥಗಳು**

೫೨. P.B.Desai, **'Jainism in south India and Some Jaina Epigraphs'**, Published by sholapur, 1957

೫೩. Dr.C.S.Patil, **'Inscriptions of Koppal District'**, Directorate of Archealogy and Museums, Mysore, 1998

೫೪. R.L.Tuner, Director School of orientol studies London, **The Gavimath and palkigundu Inscription of Asoka,** Published by The Department of Archealogy, The Goverment of Hyderbad, 1952

೫೫. **Gazetter of India, Mysore state**, Raichur Dist, Year 1970, Karnataka Govt, Bangalore

**ನಿಯತ ಕಾಲಿಕೆಗಳು**

೧. ಪ್ರಿಯಾಂಕ ಮಾಸಪತ್ರಿಕೆ

೨. ತಳಮಳ ವಾರಪತ್ರಿಕೆ

**ಪತ್ರಿಕೆಗಳು**

೧. ಭಕ್ತಬಂದು
೨. ಕೈಬರಹ ಪತ್ರಿಕೆ
೩. ಲೋಕವಾಣಿ
೪. ಸಂಜೀವಿನಿ
೫. ತುಂಗಭದ್ರ
೬. ಪ್ರಜಾವಾಣಿ
೭. ಕನ್ನಡ ಪ್ರಭ
೮. ಸಂಯುಕ್ತ ಕರ್ನಾಟಕ
೯. ನಾಗರಿಕ
೧೦. ಪ್ರಜಾಪ್ರಪಂಚ
೧೧. ಸುದ್ದಿಮಾಲ
೧೨. ರಾಯಚೂರು ವಾಣಿ
೧೩. ನವೋದಯ

**ನಾಲ್ಕನೆಯ ಅಧ್ಯಾಯದಲ್ಲಿ ಬಳಸಲಾದ ಪದಕೋಶಗಳು**

೧. ಸ್ತೂಪಿ = ಗೋಪುರದ ನಡುವಿನ ಸ್ಥಳ
೨. ಪ್ರಾಕಾರ = ದೇವಾಲಯದ ಸುತ್ತಲಿರುವ ಭಾಗ
೩. ಲಲಾಟಬಿಂಬ = ಬಾಗಿಲು ಚೌಕಟ್ಟಿನ ಮಧ್ಯಭಾಗ, ದ್ವಾರಬಂಧ
೪. ಬಾಗಿಲವಾಡ = ಬಾಗಿಲಿನ ಪಕ್ಕದಲ್ಲಿ ಮೂರ್ತಿ ನಿಲ್ಲಿಸುವ ಸ್ಥಳ
೫. ಕಪೋತ = ದೇಗುಲ ಮೇಲ್ಛಾವಣಿಯ ನೀರು ಗೋಡೆಗೆ ತಾಗದಿರಲು ಮಾಡಿದ ಮುಂಚಾಚಿದ ರಚನೆ
೬. ವಿಮಾನ = ಗರ್ಭಗುಡಿಯ ಮೇಲಿನ ಶಿಖರ
೭. ಬೋದಿಗೆ = ಕಂಬದ ಮೇಲೆ ತೊಲೆಯನ್ನು ಕೂಡಿಸಲು ಸಿದ್ಧಪಡಿಸಿದ ಭಾಗ
೮. ಸಪ್ತಮಾತೃಕೆಯರು = ಸಪ್ತದೇವತೆಗಳಾದ ಬ್ರಾಹ್ಮಿ, ಮಹೇಶ್ವರಿ, ಕೌಮಾರಿ, ವೈಷ್ಣವಿ, ಮಾಹೆ, ಇಂದ್ರಾಣಿ ಮತ್ತು ಚಾಮುಂಡಿ
೯. ದ್ವಾರಬಂಧ = ಬಾಗಿಲ ಚೌಕಟ್ಟು, ಬಾಗಿಲಿನ ನಿಲುವು
೧೦. ಕೈಪಿಡಿ ಗೋಡೆ = ಮೊಗಸಾಲೆ ಅಥವಾ ಮಾಳಿಗೆಯ ಸುತ್ತಲು ಅಲಂಕೃತ ತುಂಡುಗೋಡೆ

## ಕರ್ನಾಟಕ ರಾಜ್ಯದಲ್ಲಿ ಕೊಪ್ಪಳ ಜಿಲ್ಲೆ




ಆಧಾರ: ಕೊಪ್ಪಳ ಜಿಲ್ಲಾ ಪಂಚಾಯಿತಿ, ೨೦೦೭



ಕೊಪ್ಪಳ ಜಿಲ್ಲೆ

ಆಧಾರ ಡಾ.ದೇವರಕೊಂಡಾರೆಡ್ಡಿ, ಸಂ. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೨ ಕೊಪ್ಪಳ ಜಿಲ್ಲೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯



ಗವಿಮಠದ ಬಳಿಯಿರುವ ಅಶೋಕನ ಶಿಲಾಶಾಸನ, ಕೊಪ್ಪಳ



ಮಳೆಮಲ್ಲೇಶ್ವರದ ಬೆಟ್ಟದ ಮೇಲಿರುವ ಪಾಲ್ಕಿಗುಂಡು, ಕೊಪ್ಪಳ



ಮಳೆ ಮಲ್ಲೇಶ್ವರ ದೇವಾಲಯ, ಕೊಪ್ಪಳ



ಕೊಪ್ಪಳದ ಕೋಟೆ



ಶ್ರೀ ಗವಿಸಿದ್ಧೇಶ್ವರ ಮಠ, ಕೊಪ್ಪಳ



ಶ್ರೀ ಗವಿಸಿದ್ಧೇಶ್ವರ ಮಠದ ಜಾತ್ರೆಯ ಒಂದು ನೋಟ, ಕೊಪ್ಪಳ



ರಾಜಾಭಕ್ಷ ದರ್ಗಾ(ಯಮನೂರಪ್ಪ ದರ್ಗಾ)ದ ಇಂದಿನ ಸ್ಥಿತಿ, ಕೊಪ್ಪಳ



ಹುಲಿಗೆಮ್ಮ ದೇವಸ್ಥಾನ, ಹುಲಿಗಿ, ಕೊಪ್ಪಳ ತಾಲೂಕು

